# ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ವಜ್ರಮಹೋತ್ಸವ ಪ್ರತಿಷ್ಠಾನ.

* ಶ್ರೀ ಸಿದ್ಧಗಂಗಾ ಮಠ 600 ವರ್ಷಗಳ ಆಧ್ಯಾತ್ಮಿಕ ಪವಿತ್ರ ಪರಂಪರೆಯ ಇತಿಹಾಸ ಹೊಂದಿದೆ.
* ಇಲ್ಲಿಯ ತ್ರಿವಿಧ ದಾಸೋಹ ಮಹಾಕಾರ್ಯಗಳಾದ ಅನ್ನದಾನ, ವಿದ್ಯಾದಾನ ಧರ್ಮ-ಸಂಸ್ಕೃತಿ ಪ್ರಸಾರ ಜಗತ್ ಪ್ರಸಿದ್ಧವಾಗಿವೆ.
* ಶ್ರೀ ಮಠ ಜಾತ್ಯಾತೀತ ಸದ್ಭಾವನೆಯಿಂದ ದೀನ ದಲಿತರ ಉನ್ನತಿಗಾಗಿ ಶ್ರಮಿಸುತ್ತಿದೆ.
* ಎಲ್ಲಜಾತಿ, ವರ್ಗಕ್ಕೆ ಸೇರಿದ 5,000 ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದಾರೆ.
* ಲಕ್ಷೋಪಲಕ್ಷ ನಾಡಿನ ವಿದ್ಯಾರ್ಥಿಗಳು ಶ್ರೀ ಮಠದಲ್ಲಿ ಶಿಕ್ಷಣ ಪಡೆದು ರಾಜ್ಯದ ಎಲ್ಲೆಡೆ ಯೋಗ್ಯ ನಾಗರಿಕರಾಗಿ ಜೀವನ ಸಾಗಿಸುತ್ತಿದ್ದಾರೆ.

ನಾಡಿನ ಭಕ್ತಕೋಟಿ ಮತ್ತು ಹಳೆಯ ವಿದ್ಯಾರ್ಥಿಗಳು ಪೂಜ್ಯ ಶ್ರೀ ಶ್ರೀಗಳವರ ನಿಸ್ವಾರ್ಥ ಸಮಾಜ ಸೇವೆ, ಅಪೂರ್ವ ಜೀವನ ದರ್ಶನ ಮತ್ತು ಸಾಧನೆಗಳನ್ನು ಕೃತಜ್ಞತೆಯಿಂದ ಸ್ಮರಿಸಿ ಸನ್ಯಾಸ ಸ್ವೀಕಾರದ ವಜ್ರಮಹೋತ್ಸವ ಆಚರಿಸಲು ಯೋಜನೆಯನ್ನು ರೂಪಿಸಿದ್ದಾರೆ. ಇದು ಶ್ರೀಮಠದ ಪ್ರಸ್ತುತ ಬೆಳವಣಿಗೆಯ ಅವಶ್ಯಕತೆಗೆ ಪೂರಕವಾಗಿದೆ.

**—: ಯೋಜನೆಯ ಪ್ರತಿಷ್ಠಾನಗಳು :—**

**❁ 5 ಕೋಟಿರೂಗಳ ವೆಚ್ಚದಲ್ಲಿ**

**❁ ಸುಂದರ ಆಧುನಿಕ ಬೃಹತ್ ವಿದ್ಯಾರ್ಥಿ ನಿಲಯ**

**❁ ಏಕಕಾಲದಲ್ಲಿ 3,500 ಮಂದಿ ಊಟ ಮಾಡುವ ಬೃಹತ್ - ಪ್ರಸಾದ ನಿಲಯ**

ಎಲ್ಲರ ಕಲ್ಯಾಣವನ್ನು ಬಯಸುತ್ತಿರುವ ಶ್ರೀ ಮಠದ ಈ ಐತಿಹಾಸಿಕ ಭವ್ಯ ದಿವ್ಯ ಸ್ಮಾರಕಗಳ ನಿರ್ಮಾಣಕ್ಕೆ ಉದಾರವಾಗಿ ನಾಡಿನ ಜನತೆ ಕೂಪನ್ ಕೊಳ್ಳುವುದರ ಮೂಲಕ, ಚೆಕ್/ಡ್ರಾಫ್ಟ್ ಮೂಲಕ "ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ವಜ್ರಮಹೋತ್ಸವ ನಿಧಿ" ಹೆಸರಿನಲ್ಲಿ ನೆರವು ನೀಡಬೇಕಾಗಿ ಕೋರುತ್ತೇವೆ.

**ಪದ್ಮಭೂಷಣ ಡಾ|| ಎಂ.ಸಿ. ಮೋದಿ,** ಅಧ್ಯಕ್ಷರು

**ಬಿ.ಎಸ್. ಮುದ್ದಪ್ಪ, ಐ.ಎ.ಎಸ್.** ಕಾರ್ಯಾಧ್ಯಕ್ಷರು

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ವಜ್ರಮಹೋತ್ಸವಸಮಿತಿ,**
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572104.

# ಸಿದ್ಧಗಂಗಾ

ಸಂಪುಟ-30.  ಸಂಚಿಕೆ 9  ಸೆಪ್ಟೆಂಬರ್—1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಲ್ಯಾಣದ ಶಿವಬೆಳಕ ಹಳ್ಳಿಹಳ್ಳಿಗೆ ತಂದೆ
ಒಳ್ಳೊಳ್ಳೆ ನುಡಿಲಿಂಗ ಕಾಣಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಹಾಡುವೆ ಲಿಂಗದೊಳು ಆಡುವೆ ಲಿಂಗದೊಳು
ಕೂಡುವೆ ಜಂಗಮ ಲಿಂಗದೊಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

"ಕೋಟಿ ರವಿ ಶಶಿಗಳಿಗೆ ಮೀಟಾದ" ಶ್ರೀಬೆಳಕೆ
ಕೋಟಿ ಜಂಗಮ ಲಿಂಗ ಸಲಹಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.



# ಶ್ರೀವಾಣಿ

ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದ ದಿನಗಳು. ಪ್ರತಿಭಾವಂತ ಪ್ರಾಧ್ಯಾಪಕರ ಒಡನಾಟ. ಒಬ್ಬೊಬ್ಬರೂ ತಮ್ಮ ತಮ್ಮ ವಿಷಯಗಳಲ್ಲಿ ದಿಗ್ಗಜಗಳು. ವಿಜ್ಞಾನದ ಪ್ರಾಧ್ಯಾಪಕರು ಬೋಧಿಸುತ್ತಿದ್ದ ವಿಧಾನವಂತೂ ಆಕರ್ಷಕವಾಗಿರುತ್ತಿತ್ತು. ಕಾಲ ಕಳೆದುದೇ ತಿಳಿಯುತ್ತಿರಲಿಲ್ಲ. ಭೌತ-ಶಾಸ್ತ್ರದ ಅಧ್ಯಾಪಕರಾಗಿದ್ದ ಶ್ರೀ ಶ್ರೀನಿವಾಸರಾವ್‌ರವರ ತರಗತಿಗೆ ಯಾರೂ ಎಂದೂ ತಪ್ಪಿಸಿಕೊಂಡುದೇ ಇಲ್ಲ. ಸಂಗೀತ ಕಛೇರಿಯಲ್ಲಿದ್ದೇವೇನೋ ಎಂಬಂತೆ ಭಾಸವಾಗುತ್ತಿತ್ತು ಅವರ ಬೋಧನಾಕ್ರಮ. ಲವಲವಿಕೆಯಿಂದ ಎಲ್ಲರೂ ಕಣ್ಣಾಗಿ, ಕಿವಿಯಾಗಿ ಅವರತ್ತಲೇ ನೋಡುತ್ತ ಕುಳಿತಿರುತ್ತಿದ್ದೆವು.

ಒಮ್ಮೊಮ್ಮೆ ಯಾರಾದರೂ ಅತೀ ಮೆಲುವಾಗಿ ಮಾತನಾಡಿದರೂ ಕೇಳಿಸುತ್ತಿತ್ತು. ಅಂಥ ಸಂದರ್ಭಗಳಲ್ಲಿ ಪ್ರಾಧ್ಯಾಪಕರು ಹೇಳುತ್ತಿದ್ದ ಮಾತುಗಳು ಸೂತ್ರಪ್ರಾಯವಾಗಿರುತ್ತಿದ್ದವು. ಒಮ್ಮೆ ತರಗತಿ ಅತ್ಯಂತ ಶ್ರೇಷ್ಠ ಮಟ್ಟದಲ್ಲಿ ನಡೆದಿತ್ತು. ಭೌತಶಾಸ್ತ್ರದ ತರಗತಿ ಯಾರೋ ಮಾತನಾಡುತ್ತಿರುವುದು ಪ್ರಾಧ್ಯಾಪಕರ ಗಮನಕ್ಕೆ ಬಂದಿತು ಮರುಕ್ಷಣವೇ ತರಗತಿ-ಯನ್ನುದ್ದೇಶಿಸಿ ಪ್ರಾಧ್ಯಾಪಕರು ಹೀಗೆಂದರು. "There are people who have eyes but they cannot see. There are people who have ears but they cannot hear. And there are people who have eyes but they refuse to see, there are people who have ears but they refuse to hear." ಲೋಕದಲ್ಲಿ ಎರಡು ವರ್ಗದ ಜನರಿದ್ದಾರೆ. ಕೆಲವರಿಗೆ ಕಣ್ಣಿವೆ ಆದರೆ ನೋಡಲಾರರು. ಕೆಲವರಿಗೆ ಕಿವಿ ಇವೆ ಆದರೆ ಕೇಳಲಾರರು-ಇವರು ಒಂದುವರ್ಗದ ಜನ. ಇನ್ನೊಂದು ವರ್ಗದ ಜನರಿದ್ದಾರೆ. ಕೆಲವರಿಗೆ ಕಣ್ಣಿವೆ ಆದರೆ ಅಂಥವರು ನೋಡಲಿಚ್ಛಿಸುವುದಿಲ್ಲ, ಕೆಲವರಿಗೆ ಕಿವಿಯಿವೆ ಆದರೆ ಕೇಳಲಿಚ್ಛಿಸುವುದಿಲ್ಲ. ಕಣ್ಣಿದ್ದೂ ಕುರುಡ-ರಾಗಿರುವವರೇ ನಮ್ಮಲ್ಲಿ ಹೆಚ್ಚು. ಕಿವಿಯಿದ್ದೂ ಕೇಳದವರೇ ನಮ್ಮಲ್ಲಿ

ಬಹಳ. ವ್ಯರ್ಥ ಹರಟೆಯಲ್ಲಿ ಘಂಟೆಗಟ್ಟಲೆ ಹರಟುವ ಜನ ಒಳ್ಳೆಯದನ್ನು ಕಾಣುವ, ಒಳ್ಳೆಯದನ್ನು ಕೇಳುವ, ಒಳ್ಳೆಯದನ್ನು ಮಾಡುವವರಾದರೆ ಜನಶಕ್ತಿಯ ಶಿವಜೇಕು ಅರಳೀತು. ಶಿಕ್ಷಕರು ವ್ಯಕ್ತಿತ್ವಗಳನ್ನು ರೂಪಿಸುವ ರೂವಾರಿಗಳು, ತಮ್ಮ ಬೋಧನಾ ಕಲೆಯೊಂದಿಗೆ ಮನುಷ್ಯನನ್ನು ನಿರ್ಮಾಣ ಮಾಡುವ ಸುವರ್ಣಾವಕಾಶವನ್ನು ಪಡೆದವರು. ಅವರು ಮನಸ್ಸು ಮಾಡಿದರೆ ಶೀಲ ಸಂಪನ್ನ ಸಮಾಜ ನಿರ್ಮಾಣವಾಗುವಲ್ಲಿ ಸಂಶಯವಿಲ್ಲ. ಆದರೆ ರಾಷ್ಟ್ರದ ದೌರ್ಭಾಗ್ಯ. ಶಿಕ್ಷಕ ಇಂದು ಶಿಕ್ಷಕನಾಗಿ ಉಳಿದಿಲ್ಲ ಶಿಕ್ಷಕನಾಗುವುದೊಂದನ್ನುಳಿದು ಇನ್ನೆಲ್ಲವೂ ಆಗುವತ್ತ ನಡೆದಿದ್ದಾನೆ, ಎಲ್ಲಶಿಕ್ಷಕರೂ ಹಾಗಾಗಿದ್ದಾರೆಂದಲ್ಲ. ಉತ್ತಮ ಶಿಕ್ಷಕರು ಇದ್ದಾರೆ. ಅವರ ಸಂಖ್ಯೆ ವಿರಳ ಕೇವಲ ಪಠ್ಯ ಬೋಧಿಸಿ ತೃಪ್ತನಾದರೆ ಸಾಲದು ತನ್ಮೂಲಕ ತಾನೆಷ್ಟು ಸುಶೀಲ ವ್ಯಕ್ತಿಗಳನ್ನು ಬೆಳೆಸುವ ಪ್ರಯತ್ನ ನಡೆಸಿದೆ ಎಂಬ ಆತ್ಮ ಪರೀಕ್ಷೆ ಮಾಡಿಕೊಳ್ಳಬೇಕು. ಅದಕ್ಕೆ ಮೊದಲು ತಾನೆಷ್ಟು ಸುಶೀಲನಾಗಿದ್ದೇನೆ ತನ್ನ ಕೌಟುಂಬಿಕ ಪರಿಸರದಲ್ಲಿ, ತನ್ನ ಬಂಧು ಬಳಗದವರಲ್ಲಿ, ತಾನು ವಾಸಿಸುತ್ತಿರುವ ನೆರೆಹೊರೆಯವರ ಸಂಗಡ, ತನ್ನ ಬಳಿಗೆ ಬಂದ ಸಾರ್ವಜನಿಕರೊಂದಿಗೆ ಎಂಬುದನ್ನು ಕಂಡುಕೊಳ್ಳಬೇಕು. ಒಳ್ಳೆಯ ಶಿಕ್ಷಕನಾಗಿರುವಂತೆಯೇ ಒಳ್ಳೆಯ ಮನುಷ್ಯನಾಗಿರುವುದೂ ಮುಖ್ಯ. ಏಕೆಂದರೆ ಎಲ್ಲ ಶಿಕ್ಷಣದ ಗುರಿಯೂ 'ಮನುಷ್ಯ'ನಾಗುವುದೇ ಆಗಿದೆ.

(15-7-94 ರಂದು ಅನೌಪಚಾರಿಕ ಸಂವಾದದಲ್ಲಿ ಮೂಡಿ ಬಂದ ವಿಚಾರದೀಪ್ತಿ)

## ಸೊಂಡೂರು ವಿರಕ್ತಮಠ

ನೂರಾರು ವರ್ಷಗಳಿಂದ ತೆರವಾಗಿದ್ದ ಶ್ರೀ ಪ್ರಭುದೇವರ ಸಂಸ್ಥಾನ ವಿರಕ್ತಮಠಕ್ಕೆ ಶ್ರೀ।ಮ।ನಿ।ಪ್ರ। ಪ್ರಭುಸ್ವಾಮಿಗಳವರು ನಿರಾಭಾರಿ ಚರಪಟ್ಟಾಧಿಕಾರ ಸ್ವೀಕಾರ ಮಾಡುವುದರ ಮೂಲಕ ಭಕ್ತಾದಿಗಳ ಅಪೇಕ್ಷೆಯನ್ನು ಪೂರೈಸಿದರು. ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಶ್ರೀ। ಮ। ನಿ। ಪ್ರ। ಸಿದ್ಧರಾಮಸ್ವಾಮಿಗಳು ಪಟ್ಟಾಧಿಕಾರವನ್ನು ವಿಧಿವತ್ತಾಗಿ ನೆರವೇರಿಸಿದರು. ಈ ಸಂದರ್ಭದಲ್ಲಿ "ಪ್ರಭುಪ್ರಸಾದ" ಸ್ಮರಣ ಸಂಚಿಕೆ ಪ್ರಕಟಿಸಲಾಯಿತು.

# ಶ್ರೀ ಸಿದ್ಧಲಿಂಗೇಶ್ವರ ವಚನ



ಮಸಿ ಕಪ್ಪಾಯಿತ್ತೆಂದು
ಹಾವು ಮೆಕ್ಕೆಯ ಹಣ್ಣು ಕಹಿಯಾಯಿತ್ತೆಂದು
ತಿಪ್ಪೆಯ ಹಳ್ಳ ಕದಡಿತ್ತೆಂದು
ಹಂದಿ ಹುಡು ಹುಡುಗುಟ್ಟಿತ್ತೆಂದು
ನಾಯಿ ಬಗುಳಿತ್ತೆಂದು ಸಂದೇಹಿಸಿದವರುಂಟೆ ?
ಇದು ಕಾರಣ
ಅರಿಯದ ಅಜ್ಞಾನಿಗಳು ನುಡಿದಡೆ
ಅದು ಹಿಂಗೆ ಭ್ರಮೆಯುಂಟೆ ?
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ

ಯಾವುದಕ್ಕೆ ಯಾವುದು ಸ್ವಭಾವವಾಗಿರುವುದೋ ಅದು ಅದರಿಂದ ದೂರಾಗುವುದಿಲ್ಲ. ಆದಕ್ಕಾಗಿ ತಿಳಿದವರು ಎಂದೂ ಮರುಗರು. ಉದಾಹರಣೆಗಾಗಿ ಮಸಿ ಕಪ್ಪಾಗಿದೆ, ಹಾವು ಮೆಕ್ಕೆಯ ಕಾಯಿ ವಿಷವಾಗಿದೆ, ತಿಪ್ಪೆಯ ಹಳ್ಳ ರಾಡಿಯಾಗಿದೆ. ಹಂದಿ ಹುಡುಗುಡು ಶಬ್ದ ಮಾಡುತ್ತಿದೆ. ನಾಯಿ ಬಗುಳತ್ತದೆ ಎಂದು ತಿಳಿದವರಾರು ಆಕ್ಷೇಪ ಮಾಡುವರು. ಅವಕ್ಕೆಲ್ಲ ಅವು ಸ್ವಭಾವವೇ ಆಗಿರುವುವು. ಇದರಂತೆ ಅಜ್ಞಾನಿಗಳು ತಿಳಿಯದೆ ಏನನ್ನಾದರೂ ಮಾತನಾಡಿದರೆ ಆದರಿಂದ ತಿಳಿದವರು ಜ್ಞಾನಕ್ಕೆ ಯಾವ ಹಾನಿಯೂ ಇರುವುದಿಲ್ಲ. ಆದಕ್ಕಾಗಿ ತಿಳಿದವರು ತಿಳಿಯದಿದ್ದವರ ಮಾತಿಗೆ ಎಷ್ಟೂ ಬೆಲೆಕೊಡದೆ ತಮ್ಮ ಹಾದಿಯಲ್ಲಿ ಸಾಗುವರು. ಅಜ್ಞರ ಮಾತಿನಿಂದ ಸುಜ್ಞರ ಜ್ಞಾನಕ್ಕೆ ಎಷ್ಟೂ ಚ್ಯುತಿ ಬರುವುದಿಲ್ಲ.

ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ_ ಶ್ರೀ ತೋ. ಸಿ. ಕೈ. ಸೇ. ಸಂಘ
ಎಡೆಯೂರು-ಗದಗ)

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ದಗಂ
ಮಠದಿಂದ ಪ್ರಕಟವಾಗುತ್ತಿರುವ ಮಾ
ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾ
ಸಂಘದ ಹೆಮ್ಮೆಯ ಸೇವಾ ಪುರ
ಮೇಲಾಗಿ ಶ್ರೀ ಮಠದ ಮುಖವಾ
ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮ
ಮಹಾಸ್ವಾಮಿಗಳವರ ದಿವ್ಯ ಮಾರ್ಗದ
ನದಲ್ಲಿ 30ನೇ **ವರ್ಷಕ್ಕೆ ಪಾದಾ**
**ಮಾಡಿದೆ. ತ್ರಿವಿಧ ದಾಸೋಹ ತತ್ತ್ವ**
**ಯಿಂದ ಮುನ್ನಡೆಯುತ್ತಿರುವ ಪ**
ಈ ಧ್ಯೇಯ ಸಾಧನೆಗಾಗಿ ನಾಡಿನ
ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧ
ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾ
ಚಿಂತನ ಮುಂತಾದ ಲೇಖನಗಳನ್ನು
ತಿಸುತ್ತದೆ. ಅಸ್ವೀಕೃತ ಲೇಖನಗಳ
ಪಡೆಯಲು ಸಾಕಷ್ಟು ಅಂಚೆ ಸ್ಟಾಂ
ಳನ್ನು ಲಗತ್ತಿಸಿರಬೇಕು. ಲೇಖನಗ
ಸೂಕ್ತ ಬದಲಾವಣೆ ಮಾಡಿಕೊಳ
ಅಧಿಕಾರ ಸಂಪಾದಕರಿಗಿದೆ. ಅನುವಾ
ರೂಪಾಂತರ ಲೇಖನಗಳಿಗೆ ಮೂಲ
ಕಾರರ ಅನುಮತಿ ಪಡೆದಿರಬೇಕು. ಸ್ವೀ
ಲೇಖನಗಳಿಗೆ ಸೂಕ್ತ ಸಂಭಾವನೆ ಕೆ
ಲಾಗುವುದು.

"ಸಂಪಾದಕರು",
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.

**ಚಂದಾ ದರ**

ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಸಂಪಾದಕೀಯ

ಶ್ರಾವಣ ಬಂದಿದೆ. ಶ್ರೀ ಮಠದಲ್ಲಿ ಸೇವಾ ಶ್ರಾವಣ ಹತ್ತಾರು ರಾಗದಲ್ಲಿ ಕೇಳಿಬರುತ್ತಿದೆ. ಐದು ಸಹಸ್ರ ಎಳೆಯಕಂಠ ಶ್ರೀಗಳಿಂದ ಮೃದು ಮಧುರವಾಗಿ ಅಲೆ ಅಲೆಯಾಗಿ ಹೊರ ಹೊಮ್ಮುವ ಪ್ರತಿದಿನದ ಬೆಳಗು ಬೈಗುಗಳಲ್ಲಿ ನೆರೆದಿರುವ ಸಾಮೂಹಿಕ ಪ್ರಾರ್ಥನೆಯ ಮಂಜುಳ ಘೋಷ, ಭಾವುಕ ಹೃದಯಗಳಿಗೆ ಅಮೃತ ವರ್ಷಧಾರೆ. ಶ್ರೀ ಮಠದ ಅಧಿದೇವತೆ ಶ್ರೀ ಸಿದ್ಧಲಿಂಗೇಶ್ವರ ದೇವಾಲಯದಿಂದ ಹೊರ ಚಿಮ್ಮುವ ವೇದ ಘೋಷದ ಘನ ಗಂಭೀರಧ್ವನಿ, ಇಲ್ಲಿರುವ ವಿವಿಧ ಗದ್ದುಗೆ-ಗಳಿಂದ ಕೇಳಿಬರುವ ಘಂಟಾನಾದ. ಎಳೆಯ ಕಂದಮ್ಮಗಳ ಮುಗ್ಧ ನಿಷ್ಕಲ್ಮಷವಾದ ನಗು, ಗೋವು ಕರುಗಳ 'ಅಂಬಾ' ಧ್ವನಿ ಇವೆಲ್ಲವುಗಳಿಗೆ ಮುಕುಟವಿಟ್ಟಹಾಗೆ ಶ್ರೀ ಶ್ರೀ ಗಳವರ ಪಾದುಕೆಯ ಅನುರಣನ, ಕೇಳಬಲ್ಲವರಿಗೆ ಇಲ್ಲಿ ಮಂತ್ರವಾಣಿ ಸಂಸ್ಕೃತ–ಕನ್ನಡಗಳ ಹಿತಮಿತವಾದ ಸಮ್ಮೇಳನ. ಶ್ರೀ ಮಠದ ಸುತ್ತ ಮುತ್ತ ಇರುವ ಗಿಡ-ಮರಗಳ ಸದ್ದು, ಅರಳಿರುವ ಹೂಗಳಲ್ಲಿ ಮಧುಪಾನಕ್ಕಾಗಿ ಹಾರಾಡು-ತ್ತಿರುವ ದುಂಬಿಗಳ ಗುಂಜಾರವ. ನಿರ್ಮಾಣವಾಗುತ್ತಿರುವ ಬೃಹತ್ ಕಟ್ಟಡಗಳ ಕಲ್ಲುಟಿಗರ ಲಯಬದ್ಧ ಸುತ್ತಿಗೆಯ ಪೆಟ್ಟು, ಬೀಸುವ ತಂಗಾಳಿಯ ಪಿಸು ಸಪ್ಪಳ, ದಾಸೋಹಕ್ಕಾಗಿ ಸಿದ್ಧವಾಗುತ್ತಿರುವ ಪಾಕಶಾಲೆಯ ವಿವಿಧ ಬಗೆಯ ಧ್ವನಿ, ಯಂತ್ರೋಪಕರಣಗಳ ತಾಳ-ಮೇಳ "ನೂರು ಸ್ವರ". ಒಂದೊಂದೂ ಅತಿ ಮಧುರ. ಈ ಎಲ್ಲ ರಾಗಗಳ ಮೂಲಸ್ಥಾಯಿ "ಸೇವಾ ಸರಿಗಮ". ಹೃದಯಸ್ಥಾನವೆಂಬಂತೆ ಶ್ರೀ ಶ್ರೀ ಗಳ ಲಿಂಗಪೂಜಾವಸರದಲ್ಲಿ ಆನಂದವಾಗಿ ತೆರೆ ತೆರೆಯಾಗಿ ತೆರೆದು ಕೊಳ್ಳುವ ಭಕ್ತಿಸಂಗೀತ-ಅದೂ ಮುಂಜಾನೆ ಮೂರು ಘಂಟೆಯಿಂದಲೇ ಪ್ರಾರಂಭ. ಶ್ರಾವಣಕ್ಕೆ ಇಲ್ಲಿ ಸಿರಿವಂತಿಕೆ. "ಚೆಲ್ಲಿದನು ತಂದು ಶಿವಬೆಳಕ" ಸೃಷ್ಟಿಕರ್ತನೀಗ. ಪ್ರತಿ ಹುಣ್ಣಿಮೆಯಲ್ಲಿ ಶಿವಾನುಭವ ಗೋಷ್ಠಿ. ಶೂನ್ಯ ಸಂಪಾದನೆಯನ್ನು ಕುರಿತು ಉಪನ್ಯಾಸ. ಶ್ರಾವಣದ ತಿಂಗಳ ಪುರಾಣ ಪ್ರವಚನ. ಪ್ರಭುಲಿಂಗಲೀಲೆಯು ಗಮಕ–ವ್ಯಾಖ್ಯಾನ. ಶ್ರಾವಣಕ್ಕೆ ತೆರೆಯಬೇಕು ಕಿವಿಗಳನ್ನು. ತಾವೂ ಬನ್ನಿ "ಈ ತುಂಬಿ ಬಾಳು ತುಂಬಿರುವ ತನಕ ತುಂತುಂಬಿ ಕುಡಿಯಬೇಕು" ಎಂಬ ಕವಿ ವಾಣಿಯನ್ನು ಸ್ಮರಿಸೋಣ.

# ಭಗವದ್ಗೀತೆ

ಗಾತ್ರದಲ್ಲಿ ಗ್ರಂಥವಿದು ತೀರ ಕಿರಿದೆನಿಸಿದರು
ಅಪರಿಮಿತ ಶಾಸ್ತ್ರಗಳ ಗಹನ ತತ್ವಗಳೆಲ್ಲ
ಮುತ್ತಿನಾ ರಾಶಿಯಲ್ಲು ಸೂರೆಯಾಗಿವೆಯಿಲ್ಲಿ,
ಆದರೂ ಸ್ಫುಟತೆಗೆ ಚ್ಯುತಿ ನಸುವು ಬಂದಿಲ್ಲ

ಪರಮ ಪಾವನವಾದ ಇಂಥ ಹೊತ್ತಿಗೆಯಲ್ಲಿ
ಕಾಣಲಾರದ ವಿಷಯ ಒಂದಾದರೂ ಉಂಟೆ ?
ವೇದಾಂತ ಬಂದಿಹದು, ವ್ಯವಹಾರವೂ ಇಹುದು
ಅವತಾರ, ಮೈಮಾಂಸೆಗಳಿಗೆ ಎಡೆ ಇರದುಂಟೆ

ವಿಶ್ವರೂಪವು ಒಂದೇ ? ವಿಶ್ವಧರ್ಮವು ಒಂದೆ ?
ವರ್ಣಾಶ್ರಮದ ಸರಸ ವಿವರವೆಲ್ಲವು ಉಂಟಾ
ಯೋಗಿಶ್ವರನ ಗುಣವು, ಯಜ್ಞಚಕ್ರದ ಹಿರಿಮೆ
ಇಂತೆಲ್ಲ ರಸಭರಿತ ಕಾವ್ಯದೆರಕದ ನಂಟು !

ಉಪನಿಷದ್ ಸಾರವಿದರಲ್ಲಿ ಹುದುಗಿದ್ದರೂ
ಆ ಹರಟುತನದಲ್ಲಿ ಸಮನಾದ ಕತೆಯಿಲ್ಲ
ಬ್ರಹ್ಮ ಸೂತ್ರಗಳಂತೆ ಬಲ್ಲವರ ರಂಜನೆಯು
ಈ ದಿವ್ಯ ಕಾವ್ಯದುದ್ದೇಶ ಮೊದಲೇ ಅಲ್ಲ

ಅಂತೆ ಪಂಡಿತರಿಗೂ ಪಾಮರರಿಗೂ ಇದುವೆ
ಅಚ್ಚು ಮೆಚ್ಚಿನ ಕಲಾಕೃತಿಯು ಎನಿಸಿಹುದು
ಹೆಚ್ಚೇನು ? ಧರ್ಮ, ಸಂಸ್ಕೃತಿಯ ನೆಲೆವೀಡಿದುವೆ
ತತ್ವರತ್ನದ ಕರಂಡಕವು ಕೊನೆಗಿದು ಅಲ್ವೆ ?

ಎನ್. ಎಸ್. ಗದಗಕರ್ ನವಲೂರ ಅಗಸೆ, ಶುಕ್ರವಾರ ಪೇಟೆ, ಧಾರವಾಡ.

# ಕ್ಷೇತ್ರವಾರ್ತೆ

:- ಹೆಚ್. ಬಿ. ಗಂಗಾಧರಯ್ಯ

## ವಿದ್ಯಾರ್ಥಿ ಸಂಘದ ಉದ್ಘಾಟನೆ

ಶ್ರೀ ಮಠದಲ್ಲಿ 1994-95ನೇ ಸಾಲಿನ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನಾ ಸಮಾರಂಭ 13-8-1994 ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯ-ದಲ್ಲಿ ನೆರವೇರಿತು. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಶ್ರೀ ಎಸ್. ಬಿ. ಮುದ್ದಪ್ಪ, ಐ. ಎ. ಎಸ್. ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಬೆಂಗಳೂರು ಪೂರು ವಿಭಾಗದ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಶ್ರೀ ವಿಜಯ ಸಾಸನೂರ್ ಐ. ಪಿ. ಎಸ್. ಜ್ಯೋತಿ ಬೆಳಗಿಸುವುದರೊಂದಿಗೆ ಉದ್ಘಾಟನೆ ನೆರವೇರಿಸಿ ಮಾತನಾಡಿದರು. ಶ್ರೀ ಮಠದ ಕೇಂದ್ರ ಬಿಂದುವಾಗಿರುವ ಶ್ರೀ ಶ್ರೀ ಸ್ವಾಮಿಜೀಯವರ ಸಾಧನೆ ದೊಡ್ಡದು. ದೇವ ಮಾನವರಾಗಿ ದಿಗಂತದ ಎತ್ತರಕ್ಕೆ ಏರಿದ್ದಾರೆ. ಬೆವರು ಸುರಿಸಿ ಕಾಯಕ ಮಾಡಿ ಶಿಕ್ಷಣ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಅದ್ಭುತ ಕ್ರಾಂತಿ ಮಾಡಿದ್ದಾರೆ. ಅವರ ಮಾರ್ಗ ಅನುಸರಿಸಿ ಎಲ್ಲರೂ ನಡೆಯಬೇಕು. ಯೋಗ ಸಾಧನೆ ಪ್ರತಿರೂಪವಾಗಿ ಅವರ ಬೃಹತ್ ಸಾಧನೆ ಜನ ಮನವನ್ನು ಆಕರ್ಷಿಸಿದೆ. ನೀವು ಎಲ್ಲರೂ ಮಾನವ ವರ್ಗಕ್ಕೆ ಸೇರಿದ್ದೀರಿ. ಭಿನ್ನತೆ ಇಲ್ಲ. ರಾಷ್ಟ್ರೀಯ ಪ್ರಜ್ಞೆ ಬೇಕು. ಜಪಾನ್ ಜರ್ಮನಿ ಪ್ರಗತಿ ಸಾಧಿಸಿದಂತೆ ನಮ್ಮ ದೇಶ ಜಗತ್ತಿನಲ್ಲಿ ತಲೆ ಎತ್ತಿ ನಿಲ್ಲುವಂತೆ ವಿದ್ಯಾರ್ಥಿಗಳು ತಮ್ಮ ವ್ಯಕ್ತಿತ್ವ ರೂಪಿಸಿ ಕೊಳ್ಳಬೇಕೆಂದು ಹೇಳಿದರು.

ಅಧ್ಯಕ್ಷ ಸ್ಥಾನದಿಂದ ಶ್ರೀ ಎಸ್. ಬಿ. ಮುದ್ದಪ್ಪನವರು ಮಾತನಾಡಿ ಇಲ್ಲಿ ನಾಡಿನ ಸಹಸ್ರ-ಸಹಸ್ರ ವಿದ್ಯಾರ್ಥಿಗಳ ದೃಶ್ಯ ಅನ್ಯಾದೃಶ್ಯವಾದುದು. ಶ್ರೀ ಮಠಕ್ಕೆ ಬಂದುದು ಪುಣ್ಯ ವಿಶೇಷ. 12 ನೇ ಶತಮಾನದಲ್ಲಿ ಶ್ರೀ ಬಸವೇಶ್ವರರ ಮಹಾ-ಮನೆಯಂತೆ ಶ್ರೀ ಮಠವೂ ದೊಡ್ಡ ಮಹಾಮನೆಯಾಗಿದೆ. ಸ್ವಾಮೀಜಿಯವರ ಮಾರ್ಗದರ್ಶನ ಅರಿತು ಆಚರಿಸಬೇಕು. ಈಗಿನ ಸಿದ್ಧಾಂತ ವೈಜ್ಞಾನಿಕವಾದುದು. ಸಮಾಜ ಜೀವನಕ್ಕೆ ಕ್ರಾಂತಿಕಾರಕ ಬದಲಾವಣೆಯಾಗುತ್ತಿದೆ. ಅದಕ್ಕೆ ನಾವು ಹೊಂದಿಕೊಳ್ಳಬೇಕು. ವೈಚಾರಿಕತೆ ಬೆಳೆಸಿಕೊಳ್ಳಬೇಕು, ಎಂದು ನುಡಿದರು.

ಶ್ರೀ ಶ್ರೀ ಗಳವರು ಆಶೀರ್ವಚನ ನೀಡಿ ಲೌಕಿಕ ಸಾಧನೆ ಮಾಡಿದ ಅಮೇರಿಕ ದಲ್ಲಿ ಶಾಂತಿ ನೆಮ್ಮದಿ ಇಲ್ಲ. ಒಳ್ಳೆ, ಕೆಟ್ಟ ಕೆಲಸಗಳನ್ನು ವಿವೇಚನೆಯಿಂದ ಯೋಚಿಸಬೇಕು. ವಿದ್ಯಾರ್ಥಿಗಳು ಒಳ್ಳೆ ಸಾಧನೆ ಮಾಡುವ ಕಾಲ. ನಿರಂತರ ಪ್ರಯತ್ನಶೀಲರಾಗಬೇಕು ನಿರರ್ಥಕವಾಗಿ ಕಾಲಹರಣ ಮಾಡಬಾರದು. ಜೀವನವೇ ಮೋಕ್ಷವಾಗಬೇಕು. ಸಮಗ್ರ ವ್ಯಕ್ತಿತ್ವದ ಬೆಳವಣಿಗೆಗಾಗಿ ಶ್ರಮಿಸಬೇಕೆಂದರು.

# ಸ್ವಾತಂತ್ರ್ಯ ದಿನಾಚರಣೆ

15 ಆಗಸ್ಟ್ 1994 48ನೇ ಸ್ವಾತಂತ್ರ್ಯೋತ್ಸವವನ್ನು ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಆಚರಿಸಲಾಯಿತು. ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಸಮಾರಂಭ ಏರ್ಪಡಿಸಲಾಗಿತ್ತು. ತುಮಕೂರು ಜಿಲ್ಲಾಧಿಕಾರಿಗಳಾದ ಶ್ರೀ ಹೆಚ್. ಭಾಸ್ಕರ್ ಧ್ವಜಾರೋಹಣ ಮಾಡಿ ವಿದ್ಯಾರ್ಥಿಗಳ ಪಥ ಸಂಚಲನೆಯಲ್ಲಿ ವಂದನೆ ಸ್ವೀಕರಿಸಿದರು. ನಂತರ ಅವರು ಮಾತನಾಡಿ 47 ವರ್ಷಗಳು ಕಳೆದರೂ ಸ್ವಾತಂತ್ರ್ಯದ ನಿರೀಕ್ಷಿತ ಫಲ ಸಾಮಾನ್ಯ ಜನತೆಗೆ ದೊರಕಿಲ್ಲ. ಹೆಚ್ಚಿನ ಶ್ರಮ ಶಿಸ್ತಿನಿಂದ ಎಲ್ಲರೂ ಕ್ರಿಯಾಶೀಲರಾಗಬೇಕು. ಶ್ರೀ ಮಠದಲ್ಲಿ ಗಂಗೆ ಹರಿದು ಪಾವಿತ್ರ್ಯತೆ ಉಂಟು ಮಾಡಿದೆ. ಶ್ರೀ ಶ್ರೀಗಳವರ ಮಾರ್ಗದರ್ಶನದಲ್ಲಿ ಮುನ್ನಡೆದು ನಿಮ್ಮ ಜೀವನವನ್ನು ಉದಾತ್ತಗೊಳಿಸಬೇಕೆಂದು ಕರೆಯಿತ್ತರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಯು. ನಿಸಾರ್ ಅಹಮದ್ ಮಾತನಾಡಿ ಭಾರತಕ್ಕೆ ಲಭ್ಯವಾಗಿರುವ ಅಮೂಲ್ಯ ಸ್ವಾತಂತ್ರ್ಯ ಉಳಿಸಿಕೊಳ್ಳುವುದು ಕಷ್ಟ. ಪರಕೀಯರಿಗೆ ಇಲ್ಲಿ ಆಶ್ರಯ ದೊರಕಿದ್ದು ನಮ್ಮೆಲ್ಲರಲ್ಲಿ ಏಕತೆ ಮತ್ತು ಒಗ್ಗಟ್ಟು ಇಲ್ಲದೆ ಇದ್ದುದು. ಇದಕ್ಕೆ ಪರಿಹಾರ ಕಂಡು ಹಿಡಿದವರು ಮಹಾತ್ಮಗಾಂಧಿ. ಸಮಾನತೆ ಮೂಡಿಸಿ ನಮ್ಮೆಲ್ಲರನ್ನು ಹರಸಿ ಹಾರೈಸಿದ್ದಾರೆ. ಶ್ರೀ ಶ್ರೀಗಳವರ ಸನ್ನಿಧಿಯಲ್ಲಿ ಶ್ರೀ ಮಠ ಏಕತೆ, ಭಾವೈಕ್ಯತೆಯ ಕೇಂದ್ರವಾಗಿ ಬೆಳಗುತ್ತಿದೆ ಎಂದರು. ಶ್ರೀ ಶ್ರೀಗಳು ಆಶೀರ್ವಚನ ನೀಡಿ ಸ್ವಾತಂತ್ರ್ಯ ಬರುವ ಮುನ್ನ ನಮ್ಮ ರಾಷ್ಟ್ರದ ಪರಿಸ್ಥಿತಿ ಚಿಂತಾಜನಕವಾಗಿತ್ತು. ಗುಲಾಮರಾಗಿ ಬಾಳಿಕೆ ಮಾಡುತ್ತಿದ್ದರು. ಆದರೆ ಭಾರತಕ್ಕೆ ಒಳ್ಳೆ ಹಿನ್ನಲೆ ಪರಂಪರೆ ಇದೆ. ಧರ್ಮ ಪುಣ್ಯ ಭೂಮಿ ಇದು. ಗಳಿಸುವುದು ಸುಲಭವಲ್ಲ. ಸ್ವಾತಂತ್ರದ ಹಿರಿಮೆ ಅರಿಯಬೇಕು. ಈಗಿನ ಸಾಮಾಜಿಕ ಜೀವನ ಕೆಟ್ಟುಹೋಗಿದೆ. ಪ್ರಜಾಪ್ರಭುತ್ವದಲ್ಲಿ ಎಲ್ಲರ ಏಳಿಗೆಯಾಗಬೇಕು. ಆದರ್ಶ ನಾಗರಿಕರಾಗಿ ಸ್ವಾವಲಂಬಿಗಳಾಗಬೇಕು. ಪ್ರಗತಿ ಪಥದಲ್ಲಿ ಸಾಗುತ್ತಿರುವ ರಾಷ್ಟ್ರಗಳ ಬಗ್ಗೆ ಚಿಂತನೆ ಮಾಡಬೇಕು. ಸ್ವಾತಂತ್ರ್ಯದ ಹಿರಿಮೆಯನ್ನು ಪ್ರತಿಬಿಂಬಿಸುವ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸನಿವಾಸ ಸಂಸ್ಥೆಗಳ ವಿದ್ಯಾರ್ಥಿಗಳು ಪ್ರದರ್ಶಿಸಿದರು. ಪ್ರಾರಂಭದಲ್ಲಿ ಶ್ರೀ ಎಸ್. ಶಿವಕುಮಾರ್ ಸ್ವಾಗತ ಕೋರಿದರು. ಶ್ರೀ ಬಿ. ಪಿ. ಬಸವರಾಜ್ ವಂದನೆ ಸಲ್ಲಿಸಿದರು. ಶ್ರೀ ಶ್ರೀ ಎ. ಎಸ್, ನಂಜಾಮರಿ ಕಾರ್ಯಕ್ರಮ ನಿರೂಪಿಸಿದರು.

# ರಾಷ್ಟ್ರೀಯ ಭಾವೈಕ್ಯ; ಪಠ್ಯಪುಸ್ತಕ ಮತ್ತು ಶಿಕ್ಷಕರು

1947 ರಲ್ಲಿ ನಮ್ಮ ದೇಶ ಸ್ವಾತಂತ್ರ್ಯವನ್ನು ಪಡೆಯಿತು. ಇದೊಂದು ಅದ್ಭುತ ಘಟನೆ, ಅಷ್ಟೇ ಹೆಮ್ಮೆಯ ಸಂಗತಿ ಜರುಗಿದ್ದು 1950 ಜನವರಿ 26 ರಂದು ಅಂದು ನಾವು ಪ್ರಜಾಪ್ರಭುತ್ವವನ್ನು ಸ್ವೀಕರಿಸುತ್ತಾ ಒಂದು ಹೊಸ ಯುಗದಲ್ಲಿ ಕಾಲಿಟ್ಟೆವು. ನಮಗೆ ತೀರ ಅಪರಿಚಿತವಾದ ಯುಗವಿದು. ಆದ್ದರಿಂದಲೇ ಈ ಯುಗ ನಮ್ಮ ಮೇಲೆ ಕೆಲವೊಂದು ಸವಾಲನ್ನು ಎಸೆದಿದೆ. ಅವುಗಳಲ್ಲಿ ಬಹಳ ಮಹತ್ವ ವಾದುದು ಭಾವೈಕ್ಯತೆ. ಸಂವಿಧಾನ ಸಭೆಯ ಭಾಷಣದಲ್ಲಿ ಡಾ|| ಬಿ. ಆರ್. ಅಂಬೇಡ್ಕರ್ ಈ ಕುರಿತು ಆತಂಕ ಪಟ್ಟುಕೊಳ್ಳುತ್ತಾ ಕೊನೆಯ ಒಂದು ಮಾತನ್ನು ಹೇಳುತ್ತಾರೆ. "26 ಜನವರಿ 1950 ರಂದು ಭಾರತ ಸರ್ವತಂತ್ರ ಸ್ವತಂತ್ರ ದೇಶ ವಾಗುತ್ತದೆ. ಆದರೆ ಸ್ವಾತಂತ್ರ್ಯಕ್ಕೆ ಭವಿಷ್ಯದಲ್ಲಿ ಏನು ಸಂಭವಿಸಬಹುದು ? ಅದು ತನ್ನ ಸ್ವಾತಂತ್ರ್ಯವನ್ನು ಕಾದುಕೊಳ್ಳಬಹುದೆ? ಅಥವಾ ಮತ್ತೊಮ್ಮೆ ಕಳಕೊಳ್ಳ ಬಹುದೆ ? ಇದು ನನ್ನ ಮನಸ್ಸಿಗೆ ಬರುವ ಮೊದಲ ವಿಚಾರವಾಗಿದೆ" ಈ ಆಂತಕಕ್ಕೆ ಮುಖ್ಯ ಕಾರಣವಾದುದು ನಮ್ಮ ಭಾವೈಕ್ಯತೆಯ ಸಮಸ್ಯೆ.

ಈ ಭಾವೈಕ್ಯತೆಯ ಒಡಲನ್ನು ಬಗೆದರೆ ಮುಖ್ಯವಾದ ಮೂರು ಸಂಗತಿಗಳು ಹೊರ ಬರುತ್ತವೆ. 1 ಫೆಡರಲ್ ಸಿಸ್ಟಮ್ 2 ಧರ್ಮ ನಿರಪೇಕ್ಷತೆ (Secularsim) ಮತ್ತು 3 ವೈಜ್ಞಾನಿಕ ಮನೋಭಾವದ ಬೆಳವಣಿಗೆ. ಇವು ಒಂದನ್ನು ಬಿಟ್ಟು ಒಂದಿಲ್ಲ.

ಭಾರತ ಒಂದು ಭಾಷೆಯ, ಒಂದು ಜನಾಂಗದ, ಒಂದು ಸಂಸ್ಕೃತಿಯ ನಾಡು ಅಲ್ಲ. ಇಲ್ಲಿಯ ಜನಾಂಗೀಯ, ಭಾಷಿಕ ಮತ್ತು ಸಾಂಸ್ಕೃತಿಕ ವೈವಿಧ್ಯ ಅಪಾರ ವಾದುದು. ಆದ್ದರಿಂದ ಇವು ಸ್ವಾಯತ್ತತೆಯನ್ನು ಬಯಸುತ್ತವೆ. ಪ್ರತಿ ಭಾಷೆ, ಪ್ರತಿ ಸಂಸ್ಕೃತಿಯೂ ಸ್ವಾಯತ್ತತೆಯನ್ನು ಬಯಸುತ್ತದೆ. ಆದ್ದರಿಂದ ಅವುಗಳ ಸ್ವಾಯತ್ತತೆಗೆ ಭಂಗ ಬಂದರೆ ಇಂಡಿಯಾ ಒಡೆಯುತ್ತದೆ.

ಎರಡನೆಯದು ಧರ್ಮ, ವಿವೇಕಾನಂದರು ಚಿಕಾಗೋದಲ್ಲಿ ಭಾಷಣ ಮಾಡುತ್ತ ಭಾರತ ಧರ್ಮಗಳ ತವರು ಎಂದರು. ಇಲ್ಲಿ ಧರ್ಮಗಳು ಎನ್ನುವುದು ಬಹಳ ಮುಖ್ಯವಾದುದು. 'ಹಿಂದೂ' (ಬಹು ಸಂಖ್ಯಾತ), ಕ್ರಿಶ್ಚಿಯನ್, ಮುಸ್ಲಿಂ, ಸಿಖ್, ಬೌದ್ಧ, ಜೈನ್ ಹೀಗೆ ನಾನಾ ಧರ್ಮಗಳ ನೆಲೆವೀಡು ಇದು. ಇಲ್ಲಿ ಯಾವೊಂದು ಧರ್ಮವೂ ರಾಷ್ಟ್ರ ಧರ್ಮವಲ್ಲ. ಅಂದರೆ ರಾಷ್ಟ್ರಾಡಳಿತ ಯಾವ ಧರ್ಮದ ವಿರುದ್ಧವೂ

ಕೈ ಹಾಕುವುದಿಲ್ಲ. ಆದರೆ ಯಾವುದೇ ಧರ್ಮ ಆಕ್ರಮಣ ಶೀಲವಾದರೆ ಆಕ್ರಮಣ ಕ್ಕೊಳಗಾದವರಿಗೆ ರಕ್ಷಣೆ ಕೊಡಬೇಕಾಗುತ್ತದೆ.

ಧರ್ಮ ನಮ್ಮ ಜೀವನದಲ್ಲಿ ಬಹಳ ಭಾವಪೂರ್ಣವಾದ ಪಾತ್ರ ವಹಿಸುತ್ತದೆ ಜಗತ್ತಿನಲ್ಲಿ ಧರ್ಮದ ಸಲುವಾಗಿ ಅತಿ ಹೆಚ್ಚು ರಕ್ತಪಾತಗಳಾಗಿವೆ. ಧರ್ಮ ತನ್ನ ಅನುಯಾಯಿಗೆ ಒಂದು ಬಗೆಯ ಮುಗ್ಧ ಆವೇಶವನ್ನು ಕೊಡುತ್ತದೆ. ಆದ್ದರಿಂ ಸಂಗತಿ ಬಹಳ ಸೂಕ್ಷ್ಮವಾದುದು. ಆ ಕಾರಣಕ್ಕಾಗಿಯೇ ಧರ್ಮನಿರಪೇಕ್ಷ ಮತ್ತು ಕೋಮು ಸೌಹಾರ್ದತೆಗಳು ರಾಷ್ಟ್ರೀಯ ಭಾವೈಕ್ಯತೆಯಲ್ಲಿ ಮುಖ್ಯ ಪಾತ್ರ ವಹಿಸುತ್ತವೆ.

ಮೂರನೆಯದು ವೈಜ್ಞಾನಿಕತೆ, ವೈಜ್ಞಾನಿಕತೆಯ ಬೆಳವಣಿಗೆ ನಮ ರಾಷ್ಟ್ರೀಯ ಭಾವೈಕ್ಯಕ್ಕೆ ಬಹಳ ಮುಖ್ಯವಾದುದು. ವೈಜ್ಞಾನಿಕ ಮನೋಭಾ ವೆಂದರೆ, ಯಾವುದೇ ಸಂಗತಿಯನ್ನು ಸಾಕ್ಷಿ ಮತ್ತು ವಿಶ್ಲೇಷಣೆಯಿಂದ ಮಾತ್ರ ಒಪ್ಪು ವಂತಹದು. ಯಾವುದೇ ಸಂಗತಿ ಮನಸ್ಸಿಗೆ ಹೊಳೆಯುತ್ತದೆ ಎಂದರೆ ವಿಜ್ಞಾ ಒಪ್ಪುವುದಿಲ್ಲ. ಅದು ಎಲ್ಲಿ ಯಾವಾಗ ಯಾವ ಸನ್ನಿವೇಶವಲ್ಲಿ ಯಾವ ಆಕಾಂಕ್ಷೆಗಾ ಹೊಳೆಯಿತು ಎಂದು ಕೇಳುತ್ತದೆ. ಹಾಗೆ ತನ್ನನ್ನೇ ತಾನು ವಿಶ್ಲೇಷಣೆಗೆ ಒಳಪಡಿ ಕೊಳ್ಳುವ ಮನೋಭಾವ ಬೆಳೆದರೆ, ಮನಸ್ಸಿನ ತಾಳ್ಮೆ ಸೌಹಾರ್ದತೆ, ಸಂಯಮ ಬೆಳೆಯುತ್ತದೆ. ಮುಖ್ಯವಾಗಿ ಧಾರ್ಮಿಕ ಭಾವಾವೇಶದ ಮೇಲೆ ಅಂಕೆ ಪ್ರಾಪ್ತವಾ ಗುತ್ತದೆ. ಇಂಥ ಸಂವೇದನಾಶೀಲ ಮನೋಭಾವ ಪ್ರಜಾಪ್ರಭುತ್ವಕ್ಕೆ ಅತ್ಯವಶ್ಯ ವಾದುದು.

ಅಂಥ ಒಂದು ಶೀಲ ಸಂವರ್ಧನೆ ಆಕಸ್ಮಾತ್ ಆಗಲಾರದು. ಅದಕ್ಕೆ ಸತತವಾ ತಿದ್ದುವಿಕೆ, ತೀಡುವಿಕೆ ಬೇಕಾಗುತ್ತದೆ. ತೀಡುವಿಕೆ ಎಂದೊಡನೆ ನಾವು ಶಿಕ್ಷ ಕ್ಷೇತ್ರಕ್ಕೆ ಬರುತ್ತೇವೆ. ಹಾಗೆ ಶಿಕ್ಷಣದ ವಯಸ್ಸೆಂದರೆ ಶಾಲಾ ದಿನಗಳು, ಆದರಲ್ಲ ಪ್ರಾಥಮಿಕ, ಮಾಧ್ಯಮಿಕ ಶಾಲಾದಿನಗಳು ಬಹಳ ಮುಖ್ಯ. 'ಮಗುವೇ ಮಾನವ ತಂದೆ" ಎನ್ನುವ ವರ್ಡ್ಸ್‌ವರ್ತನ ಮಾತಾಗಲಿ, "ಗಿಡವಾಗಿ ಬಗ್ಗದ್ದು ಮರವಾ ಬಗ್ಗೀತೆ" ಎಂಬ ಜನವಾಣಿಯಾಗಲಿ ಈ ಶಿಕ್ಷಣದ ಮಹತ್ವವನ್ನೇ ಸಾರುತ್ತದೆ.

ಆದ್ದರಿಂದ ಭಾವೈಕ್ಯದ ಸಂಗತಿ ಒಂದು ಕಾಲ್ಪನಿಕ (Utopia) ತತ್ವವಾಗಿರ ಒಂದು ಭೌತಿಕ ವೈಜ್ಞಾನಿಕ ಸಂಗತಿಯಾಗುತ್ತದೆ. ಆದ್ದರಿಂದಲೇ ಅದು ಪಠ್ಯಪುಸ್ತಕ ಒಂದು ಅಂಶವಾಗುತ್ತದೆ. ನಮ್ಮ ಪಠ್ಯಪುಸ್ತಕಗಳು ಅವನ್ನು ದಾಖಲಿಸಿಯೂ ಇ

ಆದರೆ ನಮ್ಮ ಪಠ್ಯಪುಸ್ತಕಗಳು ಸಾಂಪ್ರದಾಯಿಕವಾಗೇ ಇರುವುದು ಹೆಚ್ಚು ಉದಾಹರಣೆಗಾಗಿ ಒಂದೆರಡು ಸಂಗತಿಗಳನ್ನು ಗಮನಿಸಬಹುದು. ನಮ್ಮ ಪ್ರಾಥಮಿ

ಶಾಲೆಯ ಪಠ್ಯಪುಸ್ತಕಗಳಲ್ಲಿ ಒಂದೆರಡಾದರೂ ಬೈಬಲ್ಲಿನ ಕುರಾನಿನ ಕತೆಗಳಿಲ್ಲ. ಕ್ರಿಸ್‌ಮಸ್ಸಿನ, ಈದ್‌ಮಿಲಾದಿನ ವಿಚಾರ ಇಲ್ಲ. ಅನೇಕ ಧರ್ಮೀಯರ ದೇಶದಲ್ಲಿ ಪರಸ್ಪರ ತಿಳಿವಳಿಕೆ ಇರಬೇಕಾದುದು ತೀರ ಅವಶ್ಯ. ಇಂಥ ಪರಸ್ಪರ ಸಂವಾದ ಸಾಮರಸ್ಯಕ್ಕೆ ಹಾದಿ ಆದೂ ಹೋಗಲೆಂದರೆ ನಮ್ಮ ಪಠ್ಯಗಳಲ್ಲಿ ಕ್ರಿಸ್ತ, ಮುಸ್ಲಿಂ ಧರ್ಮಕ್ಕೆ ಸೇರಿದ ಹೆಸರುಗಳೇ ಅತ್ಯಲ್ಪ. ಅವಾವ ದಾರಿಯಲ್ಲಿ ಹೊಳೆ ಹಳ್ಳ ಹರಿದರೂ ಮುನ್ನೀರಿನಾಳವನೆ ಸೇರಲೆಂದೇ ಎಂಬಂತೆ, ಎಲ್ಲ ಧರ್ಮಗಳೂ ಆಯಾ ಭೌಗೋಲಿಕ ಸಾಮಾಜಿಕ ಸಂದರ್ಭದಲ್ಲಿ ಮಾನವನ ಘನತೆಯನ್ನೇ ಒಳಿತನ್ನೇ ಸಾರುತ್ತವೆ ಎನ್ನುವಂಥ ತಿಳಿವಳಿಕೆಯ ನಿರ್ಮಾಣವೇ ಇಲ್ಲ. ಇದಕ್ಕೂ ಮನೋರಂಜನೆಯ ಮಾತೆಂದರೆ ಏಳನೆಯ ವರ್ಗದ ಪಠ್ಯಪುಸ್ತಕದಲ್ಲಿ ಬರುವ 'ಕುವೆಂಪು' ಪಾಠದಲ್ಲಿ ಅವರಿಗೊಮ್ಮೆ ಅನಾರೋಗ್ಯವಾದಾಗ ಯಾವುದೋ 'ಸ್ವಾಮಿ'ಯ ಸೇವೆ ಮಾಡಿದ-ರೆಂದೂ ಅದರಿಂದ ವಾಸಿಯಾಯಿತೆಂದೂ ವಿವರ ಬರುತ್ತದೆ. ವೈಜ್ಞಾನಿಕ ಮನೋ-ಭಾವ ಬೆಳೆಸಬೇಕಾದ ವಯಸ್ಸಿನಲ್ಲಿ ಅನಾರೋಗ್ಯವಾದಾಗ ಔಷಧೋಪಚಾರ ಮಾಡಿಕೊಳ್ಳುವುದರ ಕಡೆ ಮಕ್ಕಳ ಮನಸ್ಸನ್ನು ಸೆಳೆಯಬೇಕಾದುದು ವೈಜ್ಞಾನಿಕ ವಾಗುತ್ತದೆ. ಆದರೆ ನಮ್ಮ ಪಠ್ಯನಿರ್ಮಾಪಕರು ಟ.ಎ, ಡಿ.ಎ ಮುಂತಾದವುಗಳ ಬಗ್ಗೆ ಲೌಕಿಕರೂ ವೈಚಾರಿಕತೆಯಲ್ಲಿ ಸಂಪ್ರದಾಯವಾದಿಗಳೂ ಆಗಿಬಿಡುತ್ತಾರೆ. ಬುದ್ಧನ ಉಪದೇಶದ ಬಗ್ಗೆ ಹೇಳುತ್ತಾ "ಜೀವನ ದುಃಖಮಯವಾದುದು" ಎನ್ನುತ್ತಾರೆ. ಜೀವನದ ದುಃಖ ನಮ್ಮ ಪಾಲಿಗೆ ಇರಲಿ, ಆದರೆ ಜೀವನವನ್ನು ಕುತೂಹಲದ ಕಣ್ಣುಗಳಿಂದ ನೋಡುತ್ತಿರುವ ಮಕ್ಕಳಿಗೆ ತೆನಾಲಿರಾಮಕೃಷ್ಣನ ಬೆಕ್ಕಿಗೆ ತೋರಿದ ಹಾಲಿನ ಹಾಗೆ ಈ ದುಃಖ ಬೇಕೆ?

ನಾವು ಗಣಿತ ಕಲಿಸುವಾಗ ಪುಸ್ತಕದ ಹೊರಗೆ ರೂಢಿಗಾಗಿ ಅನೇಕ ಗಣಿತ ಸಮಸ್ಯೆಗಳನ್ನು (ಲೆಕ್ಕಗಳನ್ನು) ಕೊಡುತ್ತೇವೆ. ಗಣಪತಿಯೂ ವಿಷ್ಣುವೂ ಕೂಡಿ ಕ್ರಮವಾಗಿ ೫೦೦ ಮತ್ತು ೬೦೦ ರೂ, ವ್ಯಾಪಾರದಲ್ಲಿ ತೊಡಗಿಸಿದರು ಎಂದು ಕೊಡುತ್ತೇವೆಂದುಕೊಳ್ಳುವ, ಆಗ ಗಣಪತಿ ಮತ್ತು ವಿಷ್ಣು ಆಗುವ ಬದಲು ಇಸ್ಮಾಯಿಲ್ ಎಂದಾಗಬಹುದು. ಪಾರ್ವತಿ, ಗಂಗೆ, ಭಾಗೀರಥಿ ಪೇಟೆಗೆ ಹೋದರು ಎಂದಿರುವಲ್ಲಿ ಪಾರ್ವತಿ, ಫಾತಿಮಾ, ರೋಸಿ ಎಂದಾಗಬಹುದು. ಕುಟುಂಬದ ಸಂದರ್ಭ ಬಂದಾಗ ತಂದೆ ತಾಯಿಗಳಿಗೆ ಇಬ್ಬರೇ ಮಕ್ಕಳಿರಲಿ, ಒಂದು ಗಂಡು ಒಂದು ಹೆಣ್ಣು ಹೀಗೆ ಹೇಳುವಾಗಲೂ ಒಂದು ಹೆಣ್ಣು ಒಂದು ಗಂಡು ಎಂದಿರಲಿ, ಒಂದೇ ಮಗುವಿನ ಸಂದರ್ಭ ಬಂದಾಗ ಹೆಣ್ಣುಮಗುವೇ ಇರಲಿ, ಇಲ್ಲಿ ಲಿಂಗ ಸಮಾನತೆಯ ವಿರುದ್ಧವಾದ ಸೂಕ್ಷ್ಮತೆ ಅಡಗಿದೆ.

ನಮ್ಮ ಇಂದಿನ ಅನೇಕ ಕೋಮುವಾದದ ಸಂದರ್ಭಕ್ಕೆ ಪುಷ್ಟಿ ಕೊಡುವುದೇ ಇತಿಹಾಸ. ಭೂತಕಾಲಕ್ಕೆ ಸೇರಿದ್ದು "ವರ್ತಮಾನ ಪತ್ರಿಕೆಯ ತುಂಬ ಭೂತದ

ಸುದ್ದಿ" ಎಂಬಂತೆ ಈ ಭೂತದ ಆಟ ನಮಗೆ ಹೆಚ್ಚಾಗಿದೆ. ಆದಕ್ಕೆ ಇತಿಹಾಸದ
ಬಗ್ಗೆ ನಮಗಿರುವ ಕಲ್ಪನೆಯೇ ಕಾರಣ. ಇಂದಿನ ವೈಜ್ಞಾನಿಕ ಸಂಶೋಧನಾತ್ಮಕ
ಮತ್ತು ಸಮಾಜ ಶಾಸ್ತ್ರೀಯ ದೃಷ್ಟಿಯಿಂದ ಇತಿಹಾಸವೆಂದರೆ ರಾಜಕಾರಣಿಯರ
ಚರಿತ್ರೆಯೊ ಧರ್ಮಶಾಸ್ತ್ರಗಳ ಅಧಿಕಾರವೊ ಆಗಿ ಇಲ್ಲ.

ಇತಿಹಾಸದ ಪಠ್ಯ ಪುಸ್ತಕ ಶಿಕ್ಷಕರ ಕೈಗೆ ಸಿಕ್ಕಿದಾಗ ಅದು ಮತ್ತೆ ಜೀವ ತಳೆಯು
ತ್ತದೆ. ಇತಿಹಾಸದ ಘಟನೆಗಳನ್ನು ಆ ಕಾಲದ ರಾಜಕೀಯ ಮತ್ತು ಸಾಮಾಜಿಕ
ಸಂದರ್ಭದೊಡನೆಯೆ ವಿವರಿಸಿ ಒಂದು ನ್ಯಾಯಬದ್ಧ ನಿರ್ಣಯಕ್ಕೆ ತಲುಪಬೇಕು.
ನಾವು ಮುಸ್ಲಿಮರ ಇತಿಹಾಸವನ್ನು ವಿವರಿಸುವಾಗ ಮುಸ್ಲಿಮರು ಆಕ್ರಮಣಕಾರ-
ರೆಂದು ವಿವರಿಸುತ್ತೇವೆ. ದಾಳಿಕೋರ ಮುಸ್ಲಿಂ ದೊರೆಯ ಕೆಲಸಗಳನ್ನು ನಮ್ಮ
ಪಕ್ಕದ ಮುಸ್ಲಿಮರ ತಲೆಯ ಮೇಲೆ ಕಟ್ಟುತ್ತೇವೆ. ಇದಕ್ಕೆ ಇಂಗ್ಲೀಷರಿಂದ ನಮಗೆ
ಬಂದ ಬಳುವಳಿ ಇಂಗ್ಲೀಷರಿಗೆ ಹಿಂದು ಮುಸ್ಲಿಂ ವಿಭಜನೆಯೇ ಬೇಕಾಗಿತ್ತು. ಅದನ್ನು
ಅವರು ಯಶಸ್ವಿಯಾಗಿ ಸಾಧಿಸಿದರು. ಆದರೂ ನಾವು ಇನ್ನೂ ಇರುಳು ಕಂಡ
ಬಾವಿಯಲ್ಲೇ ಹಗಲು ಹೋಗಿ ಬೀಳುತ್ತಿರುತ್ತೇವೆ. ಮುಸ್ಲೀಮರು ಆಕ್ರಮಣಕಾರ
ರೆಂದು ಇತಿಹಾಸಕಾರರು "ಇಂಗ್ಲೀಷರು ವ್ಯಾಪಾರಕ್ಕಾಗಿ ಬಂದು ದೇಶೀ ರಾಜರುಗಳ
ಅನೈಕ್ಯತೆಯಿಂದಾಗಿ ಭಾರತದಲ್ಲಿ ರಾಜ್ಯ ಸ್ಥಾಪಿಸಿದರು" ಎನ್ನುತಾರೆ. ಅವರು ಆಕ್ರ-
ಮಣಕಾರರಾಗುವುದಿಲ್ಲ. ಇದೆಷ್ಟು ವಿಚಿತ್ರ ನೋಡಿ.

ಧರ್ಮನಿರಪೇಕ್ಷೆ ಅಥವಾ ಸೆಕ್ಯುಲರಿಸಂ ಅನ್ನುವುದು ಇಂದಿನ ಕಲ್ಪನೆ. ಹಿಂದೆ ಇದು
ರಲಿಲ್ಲ. ಯಾರು ಯಾರು ಅಧಿಕಾರ ಸಂಪತ್ತು ದೊರಕಿಸಬಯಸಿದರೂ ಅವರು ಧರ್ಮದಿ
ಹಿಡಿದು ಎಲ್ಲ ಸಾಧನವನ್ನು ಬಳಸಿಕೊಂಡರು. ಹಿಂದೂ ಸಾಮ್ರಾಜ್ಯ ಸ್ಥಾಪನೆ
ಎಂದು ಕೊಂಡ ಶಿವಾಜಿ ಸೈನ್ಯದಲ್ಲಿ ಬಹಳ ಸಂಖ್ಯೆಯಲ್ಲಿ ಮುಸ್ಲಿಂ ಸೈನಿಕರೂ ಅಧಿ
ಕಾರಿಗಳು ಇದ್ದರು. ಹಾಗೆಯೇ ಮುಸ್ಲೀಂ ದೊರೆಗಳಲ್ಲಿ ಹಿಂದೂ ಸರದಾರರಿದ್ದರು
ಖಿಲ್ಜಿ ಮನೆತನದ ಅರಸರನ್ನು ಯಾವ ಹಿಂದುವೂ ನಾಶಮಾಡಲಿಲ್ಲ. ಆದರೆ ಅಧಿಕಾ
ರಕ್ಕಾಗಿ ಅವರವರೇ ಕೊಂದುಕೊಂಡರು ಮುಸ್ಲೀಮರು ಹಿಂದೂ ನಾಶಕರಾಗಿದ್ದ
ಅವರವರೇ ಯಾಕೆ ಹೊಡೆದುಕೊಳ್ಳುತ್ತಿದ್ದರು ?

ಹಾಗೆಯೆ ಹಿಂದೂ ಅರಸರು ಹಿಂದೂ ಜನರನ್ನೇ ಸುಲಿದ ಉದಾಹರಣೆ ಅನೇ
ಇವೆ. ಘಜನೀ ಮಹ್ಮದಮೂರ್ತಿ ಭಂಜಕ. ದೇವಸ್ಥಾನ ಸುಲಿದ ಅನ್ನುತ್ತೇವೆ
'ಮೂರ್ತಿಭಂಜಕ" ಎನ್ನುವುದರ ಹಿಂದೆ ಆತ ಮುಸ್ಲಿಂ ಎನ್ನುವುದು ನಮ್ಮ ಅನಿಸಿಕೆ
ಆದರೆ ಕಾಶ್ಮೀರವನ್ನು ೧೨ ನೇ ಶತಮಾನದಲ್ಲಿ ಆಳಿದ ಹರ್ಷದೇವ ಉತ್ಪಾಟ
ಎಂಬ ಒಂದು ಖಾತೆಯನ್ನೇ ತೆರೆದಿದ್ದ ಬೊಕ್ಕಸಕ್ಕೆ ಕೊರತೆಯಾದಾಗ ಮಂದಿ
ವನ್ನು ಸುಲಿಯುವುದು ಒಂದು ದಂಧೆ, ಕೌಟಿಲ್ಯ ಕೂಡ ಬೊಕ್ಕಸ ಬರಿದಾದಾ

ಜನರ ದೇವತಾ ಮೌಢ್ಯವನ್ನು ಉಪಯೋಗಿಸಿ ಹಣ ದೊರಕಿಸಿಕೊಳ್ಳಬಹುದು ಎನ್ನುತ್ತಾನೆ. ಇವೆಲ್ಲ ಸಂಪತ್ತಿಗಾಗಿ ನಡೆದ ಲೂಟಿ, ಧರ್ಮ ಕಾರಣ ಅಲ್ಲ. ಔರಂಗಜೇಬ ಹೆಚ್ಚು ಪರಧರ್ಮ ಅಸಹಿಷ್ಣು ಎನ್ನುತ್ತೇವೆ. ಆದರೆ ಅವನದೇ ಕಾಲ ದಲ್ಲಿ ವಾರಣಾಸಿಯ ದೇವಾಲಯದ ಬ್ರಾಹ್ಮಣರು ವಂಶ ಪಾರಂಪರ್ಯ ದೇವಸ್ಥಾನದ ಪೂಜೆ ಸಲ್ಲಿಸಿಕೊಂಡು ಬರತಕ್ಕದ್ದು ಎಂಬ ಹುಕುಂ ಹೊರಡಿಸಿದ್ದ.

ಈ ಎಲ್ಲ ಹಿನ್ನೆಲೆಯನ್ನು ಗ್ರಹಿಸಿದಾಗ ಅಂದು ನಡೆದಿದ್ದು ಧರ್ಮ ಯುದ್ಧ ವಲ್ಲ. ಆದರೆ ಅದು ಅಧಿಕಾರಕ್ಕಾಗಿ ನಡೆದ ಕಚ್ಚಾಟ ಎನ್ನುವುದು ಬಹಳ ಸ್ಪಷ್ಟ. ಈ ನಿಚ್ಚಳವಾದ ಪರಿಜ್ಞಾನದಿಂದ ಇತಿಹಾಸವನ್ನು ವಿವರಿಸುವುದರಿಂದ ಎಳೆ ಮಕ್ಕಳ ಮನಸ್ಸಿನ ಮೇಲೆ ಕೋಮುವಾದಿ ಬೆಂಕಿಯ ಬರೆ ಬೀಳುವುದು ತಪ್ಪುತ್ತದೆ. ಇತಿಹಾಸ ಇದ್ದಕ್ಕಿದ್ದಂತೆ ಮರುಕಳಿಸುವುದಿಲ್ಲ. ಇತಿಹಾಸದಿಂದ ನಾವು ಯಾವುದು. ನಮ್ಮ ನಾಗರಿಕತೆಗೆ ಮಾರಕವಾದವು ಎಂಬುದನ್ನು ಅರಿತು ಅದನ್ನು ನಿವಾರಿಸಲು ಅನುಕೂಲ ಕಲ್ಪಿಸಿಕೊಳ್ಳಬೇಕು.

ನಮ್ಮ ಸಂವಿಧಾನ ಪಾರ್ಲಿಮೆಂಟರಿ ಪ್ರಜಾಪ್ರಭುತ್ವದ ಮೂಲಕ ಸಮಾಜ ವಾದಿ ಸಮಾಜ ರಚನೆಗೆ ಕರೆಕೊಡುತ್ತದೆ. ಸಮಾಜವಾದಿ ಸಮಾಜ ಎಂದರೆ ಸಮಾನತೆಯ ಸಮಾಜ, ಸಮಾನತೆ, ಸೋದರತೆ, ಸ್ವಾತಂತ್ರ್ಯ, ಇವು ಈ ಯುಗದ ಕರೆ. ಇದನ್ನು ಪೂರೈಸಲು ನಮಗೆ ಬಾಧಕವಾಗುವ ಎಲ್ಲಾ ಅಡೆತಡೆಗಳನ್ನು ನಾವು ನಿವಾರಿಸಿಕೊಳ್ಳಲೇಬೇಕು. ಅದು ಧರ್ಮ ಇರಬಹುದು, ಭಾಷೆ ಇರಬಹುದು, ಜಾತಿ ಇರಬಹುದು. ಅಸ್ಪೃಶ್ಯತೆ ಇರಬಹುದು. ಮನುಷ್ಯ ನಾಗರಿಕತೆಯನ್ನು ಕಬಳಿಸಲು ಬರುವ ಇವುಗಳನ್ನು ಹದ್ದೋಬಸ್ತಿನಲ್ಲಿಡುವುದು, ಶಕ್ತಿಹೀನ ಮಾಡು ವುದು ನಮಗೆ ಅವಶ್ಯಕ. ಜಾತಿ ಮತ್ತು ಅಸ್ಪೃಶ್ಯತೆ ಹಾಗೆಯೇ ಲಿಂಗ ಅಸಮಾ ನತೆಯನ್ನು ನಾಶ ಮಾಡವುದೇ ವಿಶಾಲ ಮಾನವೀಯತೆ ಬೆಳೆಯಲು ಅವಶ್ಯಕವಾಗಿದೆ.

ಈ ಸಂಗತಿಗಳು ಶಿಕ್ಷಕರ ಮನಸ್ಸಿನಲ್ಲಿ ಮನದಟ್ಟಾಗಬೇಕು. ಅಂದರೆ ಮಾತ್ರ ಅವರ ಅಧ್ಯಾಪನದಲ್ಲಿ ಅದು ಕ್ರಿಯಾಶೀಲವಾಗುತ್ತದೆ.

ನಮ್ಮ ಶಿಕ್ಷಕ ವೃಂದ-ಪ್ರಾಥಮಿಕದಿಂದ ಹಿಡಿದು ವಿಶ್ವವಿದ್ಯಾಲಯದ ತನಕ ವೈಜ್ಞಾನಿಕ ಮನೋಭಾವದವರೂ, ಧರ್ಮನಿರಪೇಕ್ಷೆ ಭಾವನೆ ಹೊಂದಿದವರೂ ಆಗಿ ದ್ದರೆ ದೇಶದಲ್ಲಿ ಶೇಕಡಾ ಐವತ್ತರಷ್ಟಂತೂ ಭಾವೈಕ್ಯ ಸಾಧ್ಯವಾಗುತ್ತದೆ ಎಂಬುದು ನನ್ನ ಖಚಿತವಾದ ಅಭಿಪ್ರಾಯ.

(ಸೌಜನ್ಯ : ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಯ, ಹಂಪಿ-೫೮೩೨೭೬)

—ಆರ್. ವಿ. ಭಂಡಾರಿ, ಕೆರೆಕೋಣ,
ಅರೆ ಅಂಗಡಿ, ಹೊನ್ನಾವರ ತಾ||,
ಉತ್ತರ ಕನ್ನಡ ಜಿ. 30.

# ವಿಶಿಷ್ಟ ತತ್ವಜ್ಞಾನದ ಹಾದಿಯಲ್ಲಿ ಚಾರ್ವಾಕರು

ನಮ್ಮ ದೇಶ ವಿವಿಧ ದೃಷ್ಟಿಯಿಂದ ವಿಶ್ವದಾದ್ಯಂತ ಆಧ್ಯಾತ್ಮಿಕ ಕೇಂದ್ರವಾಗಿದೆ. ಜಗತ್ತಿನ ಪ್ರಮುಖ ಧರ್ಮಗಳ ಜನ್ಮ ಭೂಮಿ ಭಾರತ. ಮೊದಲಿನಿಂದಲೂ ಭಾರತ ವಿಭಿನ್ನ ಜೀವನ ದೃಷ್ಟಿ ತತ್ವ ವಿಚಾರ ಸೃಷ್ಟಿಗಳ ಸೆಣಸಾಟಕ್ಕೆ ವೇದಿಕೆ ವೇದೋಪನಿಷತ್ತುಗಳನ್ನು ಅಪಾರುಕೇಯಯುಂದು ಆಸ್ತಿಕರ ಪ್ರಾಬಲ್ಯ ಅನಾದಿಯಿಂದ ಇದ್ದರೂ ಕೂಡಾ ಅದರ ವಿರುದ್ಧ ದಿಕ್ಕಿನಲ್ಲಿ ಈಜುವವರ ಅರ್ವಷ್ಟೆ ೯ಟ್ಟಿಯಾದ ವೈಚಾರಿಕ ನೆಲೆಯಲ್ಲಿ ಇರುವ ಧೀರರಿಗೇನು ಕೊರತೆ ಇಲ್ಲಾ. ಅವರಿಗೆಲ್ಲ ನಾಸ್ತಿಕರು ಅಥವಾ ಅವೈದಿಕ ನೆಂಬ ಅಭೀದಾನ. ಇವರೆಲ್ಲ ಜಾರ್ವಾಕರು ಪ್ರಮುಖರು.

ಭಾರತೀಯ ದರ್ಪಣಗಳ ಇತಿಹಾಸವನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವವರೆಗೂ ಜಾರ್ವಾಕರ ದುರುಷಣದ ಅಧ್ಯಾಯನ ಮಾಡುವ ಪ್ರಸಂಗ ಅನಿವಾರ್ಯ. ಉಪನಿಷತ್ತುಗಳ ಕಾಲಕ್ಕಿಂತ ಪೂರ್ವದಲ್ಲಿಯೆ ಅವೈದಿಕ ಮತವಾದಗಳು ಪ್ರಚಲಿತವಾಗಿದ್ದವೆಂದು ತಿಳಿದು ಬರುತ್ತದೆ. ಅವೈದಿಕ ದುರುಷಣದಲ್ಲಿ ಚಾರ್ವಕರು ಪ್ರಥಮವಾಗಿ ಎಣಿಸಲ್ಪಡುವರು. ಉಪನಿಷತ್ತುಗಳ ಕಾಲದಲ್ಲಿ ಜಾರ್ವಾಕರ ದುರುಪಣವು ಪ್ರಚಾರದಲ್ಲಿತ್ತೆಂಬುದಕ್ಕೆ ಕೆಳಗೆ ಕಾಣಿಸಿದ ವಾಖ್ಯಗಳು ಉದಾಹರಣೆಗಳು.

> " ಆಸ್ತೀತ್ಯೇಕೇ ನಾಯಮಸ್ತೀತಿ ಜಾನ್ಯೇ " (ಬೃಹದಾರಣ್ಯಕ)
> (ಮೃತ್ಯುವಿನ ನಂತರ ಆತ್ಮನಆಸ್ತಿವದ ಬಗೆಗೆ ಜನರಲ್ಲಿ ಸಂದೇಹಭಾವವುಂಟು)
> " ಯೇಯಂಪ್ರೇತೇ ವಿಚಿಕಿತಾಸ ಮನುಷ್ಯೇ " (ಕಠ)
> (ಕೆಲವರು ಆತ್ಮನ ಆಸ್ತಿತ್ವವನ್ನು ಒಪ್ಪಿಕೊಳ್ಳುತ್ತಿದ್ದರೆ ಕೆಲವರು-
> ಒಪ್ಪಿಕೊಳ್ಳುವುದಿಲ್ಲ)

ಭೌತಿಕವಾದಿಗಳಾದ ಜಾರ್ವಾಕರು ಸಂಪ್ರದಾಯಸ್ಥರ ವಿರುದ್ಧ ಸಿಡಿದೆದ್ದು ಅವರ ಆಚರಣೆಗಳನ್ನು ಕಠೋಕ್ತಿಗಳಿಂದ ಖಂಡನ ಮಾಡಿದರು. ಈ ದರ್ಶನದ ಲಕ್ಷವು ಧರ್ಮಾನುಯಾಯಿಗಳ ಪಕ್ಷವನ್ನು ನಿರ್ಭೀತಿ ಹಾಗೂ ನಿರ್ಧಯದಿಂದ ಖಂಡಿಸುತ್ತದೆ. ನಿರ್ವಿಚಾರ ಸಾಮಾನ್ಯ ಜನರೇ ಈ ಕಡುತನ ದರ್ಶನದ ಅನುಯಾಯಿಗಳಾಗಲು ಮುಂದೆ ಬಂದ ಕಾರಣ ಈ ದರ್ಶನವು "ಲೋಕಾಯತ" ಎಂಬ ಹೆಸರನ್ನು ಪಡೆಯಿತು.

ಜಾರ್ವಾಕ ದರ್ಶನದ ಮೂಲಪುರುಷನಾರು ? ಆತನು ರಚಿಸಿದ ಗ್ರಂಥಗಳು ಯಾವುವು ? ಎಷ್ಟು? ಮುಂತಾದ ಪ್ರಶ್ನೆಗಳಿಗೆ ಉತ್ತರ ದೊರೆಯುವುದಿಲ್ಲ.

ಜಾರ್ವಾಕ ಎಂಬ ಋಷಿಯು ಈ ದರ್ಶನದ ಮೂಲ ಪ್ರವರ್ತಕ ಆಗಿರುವುದರಿಂದ ಈ ದರ್ಶನಕ್ಕೆ " ಚಾರ್ವಾಕ ದರ್ಶನ " ಎಂಬ ಹೆಸರು ಬಂದಿರುವದೆಂದು

ಒಂದು ಅಭಿಪ್ರಾಯವಿದ್ದರೆ ಚಾರ್ವಾಕ ಶಬ್ದವು "ಚಾರು-ವಾಕ್-" ಸುಂದರವಾ
ಎಂಬ ಅರ್ಥವುಳ್ಳದ್ದು ಎಂದು ಮತ್ತೊಂದು ಅರ್ಥ ಹೇಳುತ್ತದೆ. ಈ ದರ್ಶನ
ತತ್ವಗಳೆಲ್ಲವೂ ಸಾಮಾನ್ಯ ಜನರಿಗೆ ಇಂಪಾಗಿರುವುದರಿಂದ ಆ ದರ್ಶನಕ್ಕೆ ಈ ಹೆಸ
ಬಂದಿತೆಂದು ಹೇಳುತ್ತಾರೆ ಮತ್ತೊಂದು ವಾದದ ಪ್ರಕಾರ ಚಾರ್ವಾಕ ದರ್ಶನ
ಸೂತ್ರಕಾರರು 'ಬೃಹಸ್ಪತಿ' ಆದುದರಿಂದಲೇ ಈ ದರ್ಶನಕ್ಕೆ 'ಬೃಹಸ್ಪತ್ಯ' ಎಂ
ಮತ್ತೊಂದು ಹೆಸರು ಪ್ರಾಪ್ತವಾಗಿದೆ. ಚಾರ್ವಾಕ ದರ್ಶನವು ಜನ ಸಾಮಾನ್ಯ
ವಿಚಾರ ಸಂಣಿಯನ್ನೇ ಹೆಚ್ಚು ಹೇಳುವ ಕಾರಣ ಇದಕ್ಕೆ ಪಾಮರ ದರ್ಶನವೆಂ
ಕರೆಯುತ್ತಾರೆ.

ನಾಸ್ತಿಕರಲ್ಲಿ ಯಾರೂ ಚಾರ್ವಾಕರಷ್ಟು ವೇದಗಳ ಎದುರಾಳಿಗಳಲ್ಲ ಚಾರ್ವಾ
ತತ್ತ್ವವನ್ನು ಒಂದು "ಜೀವನ ಮಾರ್ಗ" ತತ್ವ ಎನ್ನಬಹುದೇ ವಿನಃ ದೇವರ
ಕಂಡುಕೊಳ್ಳುವ ಮಾರ್ಗ ಎನ್ನುವದು ಎಳ್ಳಷ್ಟೂ ಸರಿ ಅಲ್ಲ. ಅದು ಮನುಷ್ಯನ
ಕೇವಲ ಸುಖ ಪಡುವ ಕಡೆ ಎಳೆಸುವಲ್ಲಿ ತನ್ನ ಸಾರ್ಥಕತೆಯನ್ನು ಕಂಡುಕೊಳ್ಳುತ್ತ
ಎಲ್ಲ ಸಾಂಪ್ರದಾಯಿಕ ಮೌಲ್ಯಗಳನ್ನು ಅಲ್ಲಗಳೆಯುವದರಲ್ಲಿ ತನ್ನ ಹೊಸತನ ಕಾಣ
ತ್ತದೆ. ಆಧ್ಯಾತ್ಮ ವಿದ್ಯೆಯಲ್ಲಿ ಹಾಗೂ ಚಾರ್ವಾಕರು ಎಲ್ಲ ಭಾರತೀಯ ತಾತ್ತ್ವಿ
ವ್ಯವಸ್ಥೆಗಳಿಗೂ ಅಡ್ಡ ನಿಲ್ಲುತ್ತಾರೆ. ಇಲ್ಲಿಯೇ ಇರುವದು ಅವರ "ಕ್ಷೀಣ"ವಾದ ಮತ
ಇದೇ ಅದರ ಶಕ್ತಿ ಹಾಗೂ ಕೊಡುಗೆ ಕೂಡ ಯಾಕಂದರೆ ಹೊಸಬಗೆಯ ವಿಚಾ
ಗಳನ್ನು ಹಾಗೂ ತರ್ಕವನ್ನು ಹಳಸಿದ ತತ್ವಗಳಮೇಲೆ ತರುವದು ತತ್ವಜ್ಞಾನದ
ಯಾವಾಗಲೂ ಬೆಲೆಯುಳ್ಳದ್ದು.

**ಅದಿಭೌತಿಕವಾದ :-** ಈ ವಾದವು ಭಾರತೀಯ ತತ್ವಜ್ಞಾನದಲ್ಲಿ ಮೊದ
ನಿಂದಲೂ ಕಂಡು ಬರುತ್ತದೆ. ಪ್ರಾಸಂಗಿಕವಾಗಿ ವೇದಗಳಲ್ಲಿ, ಬೌದ್ಧನ ಕೃತಿಗಳ
ಪುರಾಣಗಳಲ್ಲಿ ಮತ್ತು ಸರ್ವದರ್ಶನ ಸಂಗ್ರಹಗಳಲ್ಲಿ ಮುಂತಾದವುಗಳಲ್ಲಿ ಹೇಳಲಾಗಿ
ಚಾರ್ವಾಕರು ಈ ತತ್ವದಲ್ಲಿ ನಂಬುಗೆ ಉಳ್ಳವರಾಗಿದ್ದಾರೆ. ಅಷ್ಟೆ ಏಕೆ ಅಂಥ ದೃ
ಕೋನ ಹೊಂದಿದ ಜನರನ್ನೇ ಚಾರ್ವಾಕರು ಎಂದು ಪ್ರಾಚೀನ ಭಾರತೀಯ ಸಾಹಿ
ದಲ್ಲಿ ಹೇಳಲಾಗಿದೆ. ಈ ವಾದದಲ್ಲಿ ನಂಬುಗೆವುಳ್ಳವರಿಗೆ ಕೇವಲ ದೃಶ್ಯವ
ಅಷ್ಟೇ ಇರುತ್ತದೆ. ಮತ್ತು ಸ್ಮೃತಿ ಅಥವಾ ಮನಸ್ಸು ದೃಶ್ಯ ವಸ್ತುವಿನಿಂದ
ಹುಟ್ಟುತ್ತದೆ. ಸರ್ವದರ್ಶನ ಸಂಗ್ರಹದಲ್ಲಿ ಹೇಳಲಾದ ಚಾರ್ವಾಕ ತತ್ವ ನೋಡಿ
ಇದು ನಮಗೆ ತಿಳಿಯುತ್ತದೆ. "ಸ್ವರ್ಗವೆನ್ನುವುದು ಇಲ್ಲ, ಮೋಕ್ಷವೆಂಬುದು ಇ
ಮುಂದಿನ ಲೋಕದಲ್ಲಿ ಆತ್ಮವೆಂಬುದು ನಿಲ್ಲುವದಿಲ್ಲ. ಚತುರ್ವರ್ಣದ ಕ
ಯಾವುದೇ ರೀತಿಯಲ್ಲಿ ಫಲಕಾರಿಯಲ್ಲ. ಒಂದು ವೇಳೆ ಯಜ್ಞಕ್ಕೆ ಬಲಿ ಕೊಡ
ಪಶು ಸ್ವರ್ಗಕ್ಕೆ ಹೋಗುವುದಾದರೆ ಬಲಿ ಕೊಡುವವ ತನ್ನ ತಂದೆಯನ್ನೆ ಏಕೆ

ಕೊಡಬಾರದು ? ಮಾನವನ ಜೀವನ ಕ್ಷಣಿಕ : ಜೀವಿಸುವ ವರೆಗಾದರೂ ಜೀವನದ ಸಂತೋಷಗಳನ್ನು ಅನುಭವಿಸಬೇಕು. ದೇಹವು ಸುಟ್ಟು ಬೂದಿಯಾದ ನಂತರ ಅದು ಮರಳಿ ಬರುವದೆಂತು ?"

ಅನುಭವವನ್ನೇ ತಮ್ಮ ಅಧಿಕಾರವಾಣಿಯನ್ನಾಗಿ ಮಾಡಿಕೊಂಡ ಅವರು "ದೃಶ್ಯವಸ್ತು" ವನ್ನು ಬಿಟ್ಟು ಮತ್ತೇನನ್ನು ಮಾನ್ಯ ಮಾಡುವುದಿಲ್ಲ. ದೇವರು, ಆತ್ಮ, ಸ್ವರ್ಗ, ಮುಂದಿನ ಜಗತ್ತು ಜೀವನದ ಶಾಶ್ವತತೆ ಮುಂತಾದವುಗಳನ್ನು ಅನು-ಭವಿಸಲಾಗುವದಿಲ್ಲ. ಆದುದರಿಂದ ಚಾರ್ವಾಕರು ಅವನ್ನು ಮಾನ್ಯ ಮಾಡುವದಿಲ್ಲ.

ಆದರಂತೆ ನಾವು ನಂಬುವ ಪಂಚಭೂತಗಳಾದ ಭೂಮಿ, ನೀರು, ಗಾಳಿ, ಬೆಂಕಿ ಹಾಗೂ ಆಕಾಶ ಅವರಿಗೆ ಕೇವಲ ನಾಲ್ಕು. ಚಾರ್ವಾಕರು ಆಕಾಶವಿರುವದೆಂದು ತಮ್ಮ ಎಣಿಕೆಯಲ್ಲಿ ಸೇರಿಸುವದಿಲ್ಲ. ಕಾರಣ-ನಾವು ಆದನ್ನು ತಿಳಿದುಕೊಳ್ಳುವದು ಊಹೆಯಿಂದ, ಅನುಭವದಿಂದಲ್ಲ. ಜಗತ್ತು ಈ ಮೂಲ ತತ್ವಗಳಿಂದ ಮಾಡ-ಲ್ಪಟ್ಟಿರುತ್ತದೆ ಜೀವಿಗಳು ಹುಟ್ಟುವುದು ಆದರಿಂದಲೆ ಹಾಗೂ ಸಾವಿನ ನಂತರ ಕೂಡುವದು ಅದನ್ನೇ.

ಆತ್ಮ :– ಅದಿಭೌತಿಕವಾದಿಗಳಾದ ಚಾರ್ವಾಕರು ಕಣ್ಣಿಗೆ ಕಾಣಿಸದ, ಬದಲಿಸಲಾಗದ, ಮತ್ತು ಅಮರ ಆತ್ಮದಲ್ಲಿ ನಂಬುಗೆ ಇಡುವದಿಲ್ಲ. ಸ್ಮೃತಿಯು ದೇಹದ ವಿಶಿಷ್ಟ ಧರ್ಮ. ದೇಹವನ್ನು ಬಿಟ್ಟು ಅದು ಬೇರೆಯಾಗಿ ಇರುವದಿಲ್ಲಾ. ಯಾವುದೇ ಆತ್ಮವನ್ನು ತಿಳಿಯೂವದಿಲ್ಲ. ಆದರೆ ಸ್ಮೃತಿ ತುಂಬಿದ ದೇಹವನ್ನು ಮಾತ್ರ ತಿಳಿಯುತ್ತೇವೆ. ಪಂಚ ಭೂತಗಳ ಕೂಡುವಿಕೆಯೇ "ದೇಹ" ಸ್ಮೃತಿಯು ಈ ಐದು ಮೂಲಗಳ ಕೂಡುವಿಕೆಯೇ ಆಗಿದೆ. ನಿರ್ಜೀವ ವಸ್ತುವಿನಿಂದ ಹೇಗೆ ತಾನೆ "ಆತ್ಮ" ಅಥವಾ ಸ್ಮೃತಿ ಹುಟ್ಟುತ್ತದೆ ? ಈ ಪ್ರಶ್ನೆ ಹೇಳುವುದು ಸಹಜ. ಚಾರ್ವಾಕರು ಆದಕ್ಕೆ ಉತ್ತರಿಸುತ್ತಾರೆ. ಎಲೆ, ಅಡಿಕೆ, ಸುಣ್ಣ ಹಾಗೂ ಕಾಚು ಹೇಗೆ ಕೆಂಪು ಬಣ್ಣ ಹುಟ್ಟಿಸುತ್ತವೆಯೋ ಹಾಗೆ ಎಂದು. ಆತ್ಮಕ್ಕೆ ನಾವು ಕೊಡುವ ಕೃತಿಗಳು, ನಿಜವಾಗಿ ದೇಹದ ಕೃತಿಗಳೇ ಆಗಿವೆ.

ಚಾರ್ವಾಕದಲ್ಲಿ ಎರಡು ವರ್ಗಗಳಿವೆ. ಧೂರ್ತ ಮತ್ತು ಸುಶಿಕ್ಷಿತ. ಧೂರ್ತರು ಸ್ಮೃತಿ ತುಂಬಿದ ದೇಹವನ್ನೇ ಆತ್ಮವೆಂದು ಕರೆಯುತ್ತಾರೆ. ದೇಹದ ಜೊತೆಗೆ ಅದು ಜೀವಿಸುತ್ತದೆ. ಮತ್ತು ದೇಹದ ಜೊತೆಗೆ ನಾಶಹೊಂದುತ್ತದೆ. ಸುಶಿಕ್ಷಿತರು ದೇಹದ ಮತ್ತೊಂದು ಇರುವಿಕೆಯನ್ನು ನಂಬುತ್ತಾರೆ. ಆತ್ಮಕ್ಕೆ ನಿರಂತರ ಜ್ಞಾನವಿದೆ ಹಾಗೂ ಅನುಭವಗಳನ್ನು ಭೋಗಿಸುತ್ತದೆ. ಆದರೆ ಅದು ದೇಹದ ಜೊತೆಗೆ ನಾಶ ಹೊಂದುತ್ತವೆ. ಆತ್ಮವು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ವಲಸೆ ಹೋಗುವದಿಲ್ಲ. ಹಾಗಾಗಿದ್ದರೆ, ಮನುಷ್ಯನು ತನ್ನ ಮೊದಲಿನ ಜೀವನದ ಅನುಭವಗಳನ್ನು ಬಾಲ್ಯಾವಸ್ಥೆಯ ಅನುಭವ ನೆನಪಿಡುವ ಹಾಗೆ ಹೊಂದಿರುತ್ತಿದ್ದ.

ವೇದಗಳ ಹೀಯಾಳಿಕೆ :- ಚಾರ್ವಾಕರ ಪ್ರಕಾರ ಋಷಿ ಮುನಿಗಳ ಮಾತು ಇಂದ್ರಿಯಗೋಚರ ವಸ್ತುಗಳಮೇಲೆ ಅಧಿಕಾರಯುತವಾಗಿರಬಹುದು. ಈ ಶಬ್ದಗಳನ್ನು ನಾವು ಅನುಭವದಿಂದಲೇ ತಿಳಿಯುತ್ತೇವೆ. ಆದರೆ ವೇದಗಳು ಕೂಡ ಇಂದ್ರಿಯ ಗೋಚರವಲ್ಲದ ವಸ್ತುಗಳ ಮೇಲೆ ಅಧಿಕಾರವಾಣಿಯಲ್ಲ. ಚಾರ್ವಾಕರಿಗೆ ಇಂದ್ರಿಯ ಗೋಚರವಲ್ಲದ ವಸ್ತುಗಳಿಗೆ "ಇರುವಿಕೆ" ಇಲ್ಲ ಯಾರು ಅಂತಹ ವಿಷಯದ ಬಗ್ಗೆ ಮಾತನಾಡುತ್ತಾರೊ ಅವರು ಮೂರ್ಖರು. ವೇದಗಳ ತುಂಬ ಎಲ್ಲಾ ಕೇವಲ ಅಸತ್ಯತೆ, ಅಸಂಗತತೆ ಮತ್ತು ಪುನರುಕ್ತಿಯೇ ತುಂಬಿಕೊಂಡಿದೆ. ವೇದಗಳನ್ನು ಬರೆದವರು ಪುರೋಹಿತರು. ಅವರ ಉದ್ದೇಶ ಒಂದೆ–ತಮ್ಮ ಸ್ವಾರ್ಥ ಸಾಧನೆಗಾಗಿ ಮಂದ ಜನರನ್ನು ವಂಚಿಸುವದು. ಚಾರ್ವಾಕರು ವೇದಗಳಲ್ಲಿ ಅಪ್ರಮಾಣಿಕತೆಯನ್ನು ವ್ಯಕ್ತಪಡಿಸುವಾಗ ತೀರ ಕಠೋರೋಕ್ತಿಗಳನ್ನೇ ಬಳಸಿರುವರು. "ತ್ರಯೋ ವೇದಸ್ಯ ಕರ್ತಾರೋ ಭಂಡ ದೂರ್ತ ನಿಶಾಚರಾಃ" (ಬಂಡರೂ ದೂರ್ತರೂ ವಂಚಕರೂ ಆದ ವ್ಯಕ್ತಿಗಳೆ ತಮ್ಮ ಉದರ ಪೋಷಣೆಗಾಗಿ ವೇದಗಳನ್ನು ರಚಿಸಿದ್ದಾರೆ ಎಂಬುದೇ ಅವರ ಅಭಿಪ್ರಾಯ.)

ಆದರೆ ಚಾರ್ವಾಕರ ಈ ಹೀಯಾಳಿಕೆ ಅಷ್ಟೇನು ಸರಿಯಾದುದಲ್ಲ. ಉದಯಾನನು ಅವರ ಈ ಹೇಳಿಕೆಯನ್ನು ಖಂಡಿಸಿದ್ದಾನೆ. ಕೇವಲ ಪುರೋಹಿತ ಅಥವಾ ಪೂಜಾರಿಗಳು ಮೋಸ ಮಾಡುವದಕ್ಕೆ ಬರೆದುದಲ್ಲಾ. ಈ ಗ್ರಂಥಗಳು ವೇದಗಳು ಯಾರು ತಮ್ಮ ಸಂಪೂರ್ಣತೆ, ಭಾವಶುದ್ಧಿ ಔದಾರ್ಯ, ನಿಶ್ವಾರ್ಥತೆಗಳಿಗೆ ಹೆಸರಾಗಿದ್ದಾರೊ ಅಂಥ ಋಷಿ ಮುನಿಗಳ ಕೃತಿಗಳಾಗಿವೆ. ಈ ಮುನಿಗಳು ಉನ್ನತ ನೈತಿಕ ಮಟ್ಟವನ್ನು ಕಾಯ್ದುಕೊಂಡಿದ್ದರಲ್ಲದೆ ಸಹಜ ಮನುಷ್ಯ ಗುಣಗಳಾದ ಕಪಟ, ಸ್ವಾರ್ಥತೆ, ಸಂಪಾದನೆ ಹಾಗೂ ಮುಂತಾದ ಲೌಕಿಕ ವಿಚಾರಗಳಿಂದ ದೂರವಿದ್ದರು. ಅಂತಹ ಮಹಾಸತ್ವಶಾಲಿ ವ್ಯಕ್ತಿಗಳಿಂದ ಬಂದ ವೇದ ಮಂತ್ರಗಳು ಸಂದೇಹದಿಂದ ದೂರವಾಗಿವೆ. ವೈಕುಂಠನಾಥನು ಇದೇ ವಿಚಾರವನ್ನು ಹೊಂದಿದವನಾಗಿದ್ದಾನೆ. ಚಾರ್ವಾಕರು ವೇದಗಳ ಬಗ್ಗೆ ಹೇಳುವುದು ಪಕ್ಷಾನುಕೂಲದ ಮಾತಾಗಿದೆ.

"ಸುಖವೆ ಸರ್ವಸ್ವ" :- ಸುಖವೇ ಜೀವನದ ಪ್ರಮುಖ ಅಂಶ ಎನ್ನುವ ವಾದವು ಮೊದಲಿನಿಂದಲೂ ಇದ್ದೆ ಇದೆ ಆದರೆ ಇದರ ವಿಚಾರಣೆಗಾಗಿ ಪ್ರತ್ಯೇಕ ಗ್ರಂಥವಿರದ್ದರಿಂದ ಇದನ್ನು ತಿಳಿದುಕೊಳ್ಳಲು ಈ ತತ್ವವನ್ನು ವಿಮರ್ಶೆ ಮಾಡಿದ ಪುಸ್ತಕಗಳಿಗೆ ನಾವು ಮೊರೆ ಹೋಗಬೇಕು. ಕೃಷ್ಣಪತಿ ಬರೆದ "ಪ್ರಭೋದ ಚಂದ್ರೋದಯ" ನಾಟಕದಲ್ಲಿ ಹೀಗೆ ಹೇಳಲಾಗಿದೆ. "ಲೋಕಾಯಾತ ತತ್ವ "ಒಂದೆ ತತ್ವ ಯಾವುದರಲ್ಲಿ "ಅನುಭವ" ವೈಜ್ಞಾನದ ಮೂಲ. ಭೂಮಿ, ನೀರು, ಬೆಂಕಿ, ಮತ್ತು ಗಾಳಿಗಳಿಗೆ

ಮೂಲಗಳು; ಸಂಪತ್ತು ಹಾಗೂ ಭೋಗಿಸುವದೆ ಪುರುಷಾರ್ಥಗಳು; ಈ ಲೋಕ ಬಿಟ್ಟು ಬೇರೆ ಲೋಕವಿಲ್ಲಾ. ಮತ್ತು ಸಾವೆ ಮೋಕ್ಷ'' ಈ ಮೊದಲೆ ವಿವರಿಸಿದ ಚಾರವಾಕ ತತ್ವಕ್ಕೂ ಇದಕ್ಕೂ ಏಕರೀತಿಯ ಸಾಮ್ಯ ಇರುವದನ್ನು ನೋಡಿದರೆ ಚಾರವಾಕರ ಬೋಧನೆಯ ದಾರಿ ನಮಗರ್ಥವಾಗುತ್ತದೆ.

**ಮೋಕ್ಷವು ಸಾಧ್ಯವಿಲ್ಲ :–** ಚಾರವಾಕ ತತ್ವದ ಪ್ರಕಾರ ನೋವಿನಿಂದ ಮೋಕ್ಷ ಪಡೆಯುವದು ಸಾಧ್ಯವಿಲ್ಲ. ಈ ದೇಹಾತ್ಮಕ ಕಟ್ಟಳೆಗಳಿಂದ ಸ್ವಯಂಗೆ ಹೋಗುವದು ಸಾಧ್ಯವಿಲ್ಲ. ಜೀವಿಸಿರುವಾಗಲೆ ನೋವಿನಿಂದ ಹೊರತಾಗಿರಬೇಕೆಂಬ ವಿಚಾರಕ್ಕೆ ಯಾವುದೇ ರೀತಿಯ ಅವಕಾಶವೇ ಇಲ್ಲ. ನೋವು ದೇಹಕ್ಕಿಂತ ಮುಂಚಿನದಾಗಿದೆ. ಮೋಕ್ಷ ದೇಹದಿಂದಲೇ ಆಗಲಿ ಅಥವಾ ನೋವಿನಿಂದಲೆ ಆಗಲಿ ಕೇವಲ ಸಾವಿನ ನಂತರ ಸಾಧ್ಯ. ಚಾರವಾಕರು ಹೇಳುತ್ತಾರೆ. "ಸಾವೇ ಮೋಕ್ಷ".

ಆದುದರಿಂದ ಸುಖಪಡುವದೇ ಜೀವನ ಸಾರ. ಹಣವೆ ಸುಖಪಡುವ ಸಾಧನವಾದುದರಿಂದ ಅದನ್ನು ಕೂಡಿ ಹಾಕುವದು ಅನಿವಾರ್ಯ. ಸುಖವು ನೋವಿನ ಮುಖವಾಡದಲ್ಲಿ ಬಂದರೆ ಅದನ್ನು ತಿರಸ್ಕರಿಸುವದು ಯಾವ ಜಾಣತನ? ತವುಡಿನಲ್ಲಿರುವದೆಂದು ಗೋಧಿಯನ್ನು ಬಿಡಲಾದೀತೆ? ಮೀನಿನಲ್ಲಿರುವ ಎಲವುಗಳಿಂದಾಗಿ ಮೀನನ್ನೆ ತಿರಸ್ಕರಿಸಬಾರದು. ದನಗಳ ಕಾಟವಾಗಬಹುದೆಂದು ರೈತ ಪೈರ ಬೆಳೆಯುವದು ಬಿಡುವದೆ? ಯಾವನೂ ಈ ಜೀವನದ ಸುಖ ಭೋಗಗಳನ್ನು ಮುಂದಿನ ಜೀವನದ ಆಶೆಯಿಂದಾಗಿ ಬಿಡಬಾರದು. ಕೈಯಲ್ಲಿರುವ ಒಂದು ಹಕ್ಕಿ ಗೂಡಿನಲ್ಲಿರುವ ಎರಡು ಹಕ್ಕಿಗೆ ಮಿಗಿಲು ಸುಖಕ್ಕಿಂತ ದುಃಖವನ್ನೇ ತಂದೊಡ್ಡುವ ಯಾವದೆ ಕೃತಿಯು ಖಂಡನಾರ್ಹ.

ಚಾರವಾಕರ ಈ ಎಲ್ಲಾ ತತ್ವಗಳು ಸಾಕಷ್ಟು ಜನರನ್ನು ಆಕರ್ಷಿಸಿವೆ. ನಿಷ್ಪಕ್ಷಪಾತದೃಷ್ಟಿಯಿಂದ ವಿಚಾರ ಮಾಡುವವರು ಚಾರವಾಕರ ದರ್ಶನವನ್ನು ತಿರಸ್ಕರಿಸಲು ಸಾಧ್ಯವಿಲ್ಲ.

ನಿಜವಾಗಿಯೂ ಚಾರವಾಕರ ದರ್ಶನವು ಅಂಥಹ ವಿಶ್ವಾಸದ ಮೇಲೆ ದೊಡ್ಡ ದಾಳಿಯನ್ನೇ ಮಾಡಿರುವುದು ಕಂಡು ಬರುತ್ತದೆ.

ಲೇಖಕರು:– ಮಹಾಂತೇಶ ಮಲ್ಲನಗೌಡರ್. ಎಂ. ಎ. ಇಂಗ್ಲೀಷ್ ಉಪನ್ಯಾಸಕರು,
ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜ್, ಕೊಪ್ಪಳ, ರಾಯಚೂರುಜಿಲ್ಲೆ.

# ಕರ್ತೃತ್ವ ಶಿಖಾಮಣಿ ರಾಮಸಿಂಗ ಖುಶಾವ

ನಾನೀಗ ಹೇಳುವ ಕಥೆ ತಮಗೆ ಕಾಲ್ಪನಿಕವೆನಿಸಬಹುದೆ? ಇಲ್ಲ ಅದೊಂದು ನೈಜ ಘಟನೆ. ಧರ್ಮ ಎಂದೂ ಅವನತಿಯಾಗುವದಿಲ್ಲ. ಆದಕ್ಕೆ ಅವಸಾನವು ಇಲ್ಲ. ಮಾಸುವದೂ ಅಲ್ಲ. ಹಲವಳ ಹೊಲಸುತನಕ್ಕೆ ಎಂದೂ ತಲೆಬಾಗದು. ಸದಾ ತನ್ನ ಪಾವಿತ್ರತೆ ಕಾಯ್ದುಕೊಂಡು ಚಿರಕಾಲಬೆಳಗುವ ಪರಂಜ್ಯೋತಿಯಾಗಿ, ತನುಮನ ಶುಚಿಗೊಳಿಸಿ ಆತ್ಮಾನಂದ ನೀಡುವುದಲ್ಲದೆ ಈ ಸೃಷ್ಟಿ ಉತ್ಪತ್ತಿಯ ಘನಶಕ್ತಿಯ ಕೇಂದ್ರವದು. ವಾಮಮಾರ್ಗದಲ್ಲಿ ನಡೆಯುವ ಆಧಮರಿಗೆ ಧರ್ಮನೆನಪು ಬರುವದು ಯಾವಾಗತಾನೆ?

ದೇವರು ಮನುಷ್ಯನನ್ನು ಸೃಷ್ಟಿಸಿರುವುದು ನಿಜ. ಆದರೆ ಒಳ್ಳೆಯ ಕೆಲಸಕ್ಕಾಗಿ ಮಾತ್ರ. ನಾವು ಅಹಿಂಸಾ ಮಾರ್ಗದಲ್ಲಿ ಸಾಗಿ ಜಾತಿ ಮತ ಪಂಥ ಕುಲಗೋತ್ರಗಳ ಭೇದವೆಣಿಸದೆ, ಸರಿಸಮಾನವಾಗಿ ಆತ್ಮವಿಶ್ವಾಸದಿಂದ ಬೆರತು, ನೊಂದವರ ಕಣ್ಣೀರನೊರೆಸುವ ಸಾಂತ್ವನ ಶಕ್ತಿಯೇ ನಿಜವಾದ ಮಾನವೀಯತೆಯ ಧರ್ಮ. ಅದುವೇ ಕರ್ತವ್ಯ.

ರಾಮಸಿಂಗ ಪವಿತ್ರ ಭಾರತ ಮಾತೆಯ ಅಂಗರಕ್ಷಕ. ಆವಳ ಪದತಳದಲ್ಲಿ ಪಣಿಯಿಟ್ಟು ಕರ್ತವ್ಯಶೀಲನಾಗಿ ಕೈಯಲ್ಲಿ ಕೋವಿಯಿಡಿದುಮನಮುಟ್ಟಿ ಸೇವೆ ಮಾಡುವ ಯೋಧ. (No. 6621845 ದ ೀವಾಲ 1 ರೆಜಮೆಂಟ Asc Score C/o 56 Apo) ವಿಧಿಯು ಯಾರನ್ನು ಬಿಡದು. ಮುದ್ದುಮುನ್ನಿಗೆ ಮೈಯಲ್ಲಿ ಹುಷಾರಿಲ್ಲವೆಂದು ಜಾನಕಿಯಿಂದ ಕಾಗದ ಬಂದಿತು. ಸಾವಿರ ಶತ್ರುಗಳನ್ನು ಸೀಳಬಲ್ಲ ಎದೆಗಾರಿಕೆ ತನಗಿದ್ದರೂ ಬಾಳಂಗಳದಲ್ಲಿ ಅರಳಿದ ಹೂವಿಗೆ ನೋವಾದಾಗ ಎದೆವೊಡೆದು ಚೂರಾಯಿತು. ತಕ್ಷಣವೇ ರಜೆಪಡೆದುಕೊಂಡು ಉತ್ತರಪ್ರದೇಶದ “ ಮೈನಪುರಿ ” ಎಂಬ ಜಿಲ್ಲೆಯ ತನ್ನ ಸಮೀಪದ ಹಳ್ಳಿಗೆ ಬಂದುಬಿಟ್ಟನು. ಮಗಳಮುಖ ಕಣ್ಮುಂದೆ ಕಟ್ಟಿದಂತಾಗಿತ್ತು. ಆ ಹಸಗೂಸು ಇನ್ನು ಎದೆಯಮೃತ ಸವಿಯುವ 1½ ವರ್ಷದ ಬಾಲೆ. ಆವಳು ತಪ್ತಜ್ವರದಿಂದ ನರಳಾಡುತ್ತ ತನ್ನ ತಂದೆಗೋಸ್ಕರ ಜೀವ ಹಿಡಿದು ಕಾದಿದ್ದಳು. ಕೊನೆಗೆ ಕಣ್ತುಂಬ ನೋಡಿ ಕಣ್ಣು ಮುಚ್ಚಿದವಳು ಮತ್ತೊಮ್ಮೆ ಕಣ್ಣು ತೆರೆಯಲೇ ಇಲ್ಲ. ಕ್ಷಣಾರ್ಧದಲ್ಲಿ ಮನೆಯು ಮಸಣದ ನೆಲೆಯಾಯಿತು.

ಮಗಳ ಅಂತ್ಯಕ್ರಿಯೆ ಮುಗಿಸಿ ಇನ್ನೂ ಹನ್ನೆರಡು ಗಂಟೆ ಕಳೆದಿರಲಿಲ್ಲ. ಆ ಎರಡೂ ಜೀವಿಗಳು ಕಣ್ಣೀರಿನ ಹೊಳೆಯಲ್ಲಿ ಬೆಂದು ಮುನ್ನಿಯ ಭಾವಚಿತ್ರ ಎದೆಗವಚಿಕೊಂಡು ದುಃಖ ಪಡುತ್ತಿರುವ ತಾಯ್ತನದ ಕಿಚ್ಚು ಕರಳು ಕತ್ತರಿಸುವಂತಿತ್ತು.

"ತೇನ ವಿನಾತೃಣಮಪಿ ನ ಚಲತಿ" ಭಗವಂತನ ಕೃಪೆಯಿಲ್ಲದೆ ಒಂದು ಹುಲ್ಲುಕಡ್ಡಿಯು ಅಲುಗಾಡಲು ಸಾಧ್ಯವಿಲ್ಲ. ಮನುಷ್ಯ ಪರಿಸ್ಥಿತಿಯ ದಾಸ. ನಾವು ಸ್ವಪ್ರಯತ್ನದಲ್ಲಿ ವಿಶ್ವಾಸವಿಟ್ಟು ಧೈರ್ಯ ಶ್ರದ್ಧೆಯಿಂದ ದುಡಿದಾಗ ಮಾತ್ರ ಯಶಸ್ವಿಗು-ವುದರಲ್ಲಿ ಸಂದೇಹವಿಲ್ಲ. ಅಂಥ ದುರ್ಭರ ಪ್ರಸಂಗ ರಾಮಸಿಂಗನ ಬಾಳಿನಲ್ಲಿ ಧರ್ಮ ದೇವತೆ ಒಡ್ಡಿರುವದು ಮುಂದಿನ ಕಲ್ಯಾಣಕ್ಕಾಗಿ ಎಂಬುದು ಯಾರು ಊಹಿಸರು?

ಭಾರತದ ಇತಿಹಾಸದಲ್ಲಿ ೨೦ ಸೆಪ್ಟೆಂಬರ್ ೧೯೯೩ ಮಾನವರ ದುರಂತದ ಭೀಕರ ಭೂಕಂಪ ಘಟನೆ. ಅದು ವಿಶ್ವವನ್ನೇ ಶೋಕಾಚರಣೆಯಲ್ಲಿ ಪಾಲ್ಗೊಳ್ಳು-ವಂತೆ ಮಾಡಿತು. ಆ ಭೂಕಂಪಮಾರಿ ತನ್ನ ಒಡಲ ದಾಹವನ್ನು ಹಿಂಗಿಸಿಕೊಳ್ಳಲು ಮಹಾರಾಷ್ಟ್ರದ ಉಸ್ಮಾನಾಬಾದ ಮತ್ತು ಲಾತುರ ಜಿಲ್ಲೆಯ ೫೨ ಹಳ್ಳಿಗಳನ್ನು ತನ್ನ ದವಡೆಯಲ್ಲಿ ಹಿಡಿದು ಕರಕರನೆ ತಿಂದು "ಕಿಲ್ಲಾರಿ" ಗ್ರಾಮವನ್ನೆ ಸಂಪೂರ್ಣ ವಾಗಿ ನುಂಗಿ ನೀರು ಕುಡಿದಿದ್ದಳು. ಈ ಭಯಾನಕ ದುರಂತ ಕುರಿತು ಕ್ಯಾಪ್ಟನ್ ಭಂಡಾರೆಯವರು ರಾಮಸಿಂಗನಿಗೆ "ಸಹಸ್ರಾರು ಜೀವಿಗಳು ನೆಲದಲ್ಲಿ ಹೂತು ಭೂಕಂಪ ಮಾರಿಗೆ ಔತಣರಾಗಿದ್ದಾರೆ" ಅವರ ನೆರವಿಗಾಗಿ ಸರಕಾರವು 9 ಗಡವಾಲ ರೆಜಮೆಂಟಿಗೆ ಆದೇಶ ನೀಡಿದೆ. ಆದರೆ ನೀನು ಮುನ್ನಿಯ ದುಃಖವನ್ನು ಬದಿಗಿರಿಸಿ ಆ ಜೀವಿಗಳಿಗೆ ಜೀವದಾನ ನೀಡುವ "ಸಂಜೀವಿನಿಯಾಗು" "ಕರ್ತೃತ್ವ ಶಿಖಾಮಣಿ ಯಾದ ನೀನು ಮಾತ್ರ ಸೇವಾಸೈನಿಕನೆಂಬುದು ಮರೆಯದಿರು. ಜನ ಸೇವೆಯೇ ಜನಾರ್ಧನ ಸೇವೆ" ನೆನಪಿರಲಿ.

"ಶಕ್ತಿಯೇ ಜೀವನ ದುರ್ಬಲತೆಯೇ ಮರಣ" ಜಗತ್ತು ಶಕ್ತಿಯನ್ನು ಪೂಜಿಸುವದು. ನಾವು ಕಷ್ಟದಲ್ಲಿದ್ದವರನ್ನು ಎಷ್ಟೇ ಆತಂಕಗಳು ಬಂದರೂ, ಅದನ್ನು ಲೆಕ್ಕಿಸದೆ ಸಂಕಟದಿಂದ ಪಾರು ಮಾಡುವ ಪ್ರಯತ್ನವೇ ಧರ್ಮ, ಅದುವೇ ದಯೆ. ಈ ಮಾತು ಅರ್ಥೈಸಿಕೊಂಡ ರಾಮಸಿಂಗನು ತನ್ನ ಹೆಂಡತಿಗೆ ಪರಿ ಪರಿ ಸಮಾಧಾನ ಹೇಳಿ ಕಿಲ್ಲಾರಿಗೆ ಹೊರಟಿರುವದು ಅಷ್ಟೆ ಸತ್ಯ.

ಇಡಿ ರಾತ್ರಿ ಪ್ರವಾಸ ಮಾಡಿ, ಬೆಳಗಿನ ಆರುಗಂಟೆಗೆ ಕಿಲ್ಲಾರಿ ತಲುಪಿದ. ಎಲ್ಲೆಡೆಗೂ ಆಕ್ರೋಶಧ್ವನಿಗಳು. ನರರ ರಕ್ತಾಭಿಷೇಕದಿಂದ ತೃಪ್ತಿಗೊಂಡ ಭೂಕಂಪ ಮಾರಿ ಮದೋನ್ಮತ್ತದಿಂದ ಅಲೆಯುತ್ತಿದ್ದಳು. ರಕ್ತದ ಕಾರಂಜಿಗಳು ಎಲ್ಲಿ ನೋಡಿದಲ್ಲಿ ಜಿಗಿಯುತ್ತಿದ್ದವು. ಇಂಥ ನರಕದ ಮನೆಯಲ್ಲಿ ಸರ್ವಾಧಿಕ ಜೀವಿಗಳು ನಿಸ್ತೇಜದಿಂದ ಮೌನವಾಗಿದ್ದವು. ಈ ಭಯಾನಕ ದೃಶ್ಯ ಎಂಥ ಉಕ್ಕಿನ ಹೃದಯಕ್ಕೂ ನಡುಕು ಹುಟ್ಟಿಸುವಂತಿತ್ತು. ಆದರೆ ರಾಮಸಿಂಗನು ತಿಲ ಮಾತ್ರ ಅಳುಕದೆ ತನ್ನ ಬೆಂಬಲಿಗರೊಂದಿಗೆ ಅಸಂಖ್ಯಾತ ಶವಗಳನ್ನು ಹೊರತೆಗೆದನು ಅವನಿಗೆ ದಣಿವು-ಆಯಾಸ, ಹಸಿವು-ನೀರಡಿಕೆಗಳು ಮಾಯವಾಗಿದ್ದವು. ಕಿಲ್ಲಾರಿಯ

ಧ್ವಸ್ಥ ಚಿತ್ರ ಮತ್ತು ಮನ್ನಿಯ ನೆನಪು ಮನದಿಂದ ಅಳಿಯಲು ಅಸಾಧ್ಯವಾಗಿತ್ತು.
ುಧ್ವಸ್ಥ ಚಿತ್ರ ಮತ್ತು ಮುನ್ನಿಯ ನೆನಪು ಮನದಿಂದ ಅಳಿಯಲು ಅಸಾಧ್ಯವಾಗಿತ್ತು. ಈ ವೇದನೆಗಳ ತಾಕಲಾಟದಲ್ಲಿ ರಾತ್ರಿ ಕೂಡ ನಿದ್ರೆ ಹೋದಾಗ ವಿಚಿತ್ರ ಕನಸು ಂಡದ್ದು ವೈಚಾರಿಕವಾಗಿ ಸತ್ಯವಾಗಿತ್ತು. ಮುನ್ನಿ ಒಂದು ಮನೆಯ ಬುಡದಲ್ಲಿ ಕ್ಕು ವಿಲ ವಿಲನೆ ಒದ್ದಾಡುತ್ತಿದ್ದಾಳೆ. ಗಾಬರಿಯಿಂದ ಡ್ಯಾಡಿ! ಓ ಡ್ಯಾಡಿ, ನಾನು ಇಲ್ಲಿಯೇ ಇದ್ದೇನೆ. ನನ್ನನ್ನು ಉಳಿಸು ಬಾ! ಎಂಬ ಶಬ್ದಗಳು ಕಿವಿಗೆ ತಾಕದೇ ಡ "ಬಂದೆ! ಮುನ್ನಿ ಬಂದೆ!" ಎಂದೆನುತ ಹಾಸಿಗೆಯಿಂದ ಧೀಡಿರನೆ ಎದ್ದಾಗ ಳೆಯರಿಗೆಲ್ಲ ದಂಗುಬಡಿದಂತಾಯಿತು. ಆಗ ಮತ್ತೆ ಮತ್ತೆ ಅದೇ ಧ್ವನಿ! ಅದೇ ಚಿತ್ರ! ದೇ ಮಾತು! ಅದೇ ಮುನಿ!

ಕಿಲ್ಲಾರಿ ಉಧ್ವಸ್ಥವಾಗಿ ಮೂವತ್ತಾರು ಗಂಟೆ ಕಳೆದಿತಿತ್ತು. ತನ್ನ ಮನದಲ್ಲಿ ಚ್ಚೊತ್ತಿದ ಕನಸಿನ ಶಿಶುವನ್ನು ಶೋಧಿಸಲು ಪ್ರತಿ ಅಂಗುಲ ಸಹಿತ ಬಿಡದೆ ಚ್ಚನಂತೆ ಅಲೆಯ ತೊಡಗಿದ. ಕೊನೆಗೆ ಆ ಸ್ಥಳ ಗುರುತಿಸಿಕೊಂಡು ಅಗೆದು ನೆಲದ ಆಳಕ್ಕೆ ಇಳಿದಾಗ ಒಂದು ಕಿಂಡಿ ಕಂಡು ಅದರೊಳಗೆ ಇಣಿಕಿ ನೋಡಲು ಕನಸಿನ ಪುಟ್ಟ ಕಂದಮ್ಮ ತನ್ನ ತಾಯಿಯನ್ನು ಬಲವಾಗಿ ಅಪ್ಪಿಕೊಂಡು ಕಿರುಚುತ್ತ, ಹಸಿದ ಒಡಲಿಗೆ ಹನಿ ಹಾಲಿಲ್ಲದೆ ಬಿಕ್ಕಿ ಬಿಕ್ಕಿ ಅಳುತಿತ್ತು. ಅದನ್ನು ಕಂಡೊಡನೆ "ಮೇರಿ ಮುನ್ನಿ ಜಿಂದ ಬಾದ್" ಎಂದವನೆ ಕಿಂಡಿಯಲ್ಲಿ ನುಸುಳಿ ಜೀವದ ಹಂಗುದೊರೆದು ಆ ಎರಡೂ ದೇಹಗಳನ್ನು ಹೊರತರುವುದೆಂದರೆ ಮೃತ್ಯು ವಿನ ಜತೆ ಸೆಣಸಾಟವಾಡಿದಂತಾಯಿತು. ಸುದೈವದಿಂದ ಮಗು ಅರಜೀವಿಯಾಗಿ ಕಣ್ಣು ಪಿಳುಕಿಸುತಿದ್ದರೆ, ತನ್ನ ಮುಚ್ಚಿದ ಕಣ್ಣು ತೆರೆಯುವಂತಿರಲಿಲ್ಲ ಆದು ದುರ್ಭಾಗ್ಯ ತಾಯಿ.

ಈ ಸುದ್ದಿ ಎಲ್ಲೆಡೆಗೂ ಹಬ್ಬಿತು. ರಾಮಸಿಂಗನ ಸಂತೋಷಕ್ಕೆ ಮೇರೆ ಇರಲಿಲ್ಲ. ತನಗಾದ ಆನಂದವನ್ನು ಜಾನಕಿಗೆ ತಿಳಿಸಿದಾಗ ಹೌಹಾರಿ ಉಲ್ಲಾಸದಿಂದ ಓಡಿಬಂದಳು. ನಿಜ ಹೇಳಬೇಕೆಂದರೆ ರೂಪ ಆಕಾರ ಬಣ್ಣದಲ್ಲಿ ಮುನ್ನಿಯನ್ನೆ ಹೋಲುತ್ತಿದ್ದು ನೊಂದ ಹೃದಯಿಗಳಿಗೆ ಆನಂದ ನೀಡಬಲ್ಲ ಅದ್ಭುತ ಮಗು ಅದಾಗಿತ್ತು.

ಅದೊಂದು ಚಿಂತಾಜನಕ ಕಥೆ ಸುಖ ಸಂಸಾರದಾನಂದದ ಬಳ್ಳಿಯಲ್ಲಿ ಅರಳಿನಿಂತ ಮೊದಲ ಕುಸುಮವದು. ಹುಟ್ಟಿ ಸುಮಾರು ಎಂಟು ತಿಂಗಳಾಗಿರುವಾಗ, ತಂದೆ ದಿನನಿತ್ಯದ ತನ್ನ ಕಾರ್ಯ ಮುಗಿಸಿಕೊಂಡು ಮನೆಗೆ ಹಿಂತಿರುಗುತ್ತಿದ್ದಾಗ, ಗಿಡಗದಂತೆ ಬೆನ್ನಟ್ಟಬಂದ ಮಾರಿ ರೂಪದ ಲಾರಿಯೊಂದು ಅವನನ್ನು ಬಲಿತೆಗೆದು ಕೊಂಡು ತಾಯಿ ಮಗುವನ್ನು ಅನಾಥರನ್ನಾಗಿ ಮಾಡಿತ್ತು. ವಿಧವೆಯಾದ ತಾಯಿ ಎಲ್ಲ ಬಯಕೆಗಳನ್ನು ಮಗುವಿನಲ್ಲಿ ಇಟ್ಟುಕೊಂಡು ದಿನನೂಕುತ್ತಿರುವಾಗ ಕಟುಕ ಭೂಕಂಪ ಮಾರಿ ತಾಯಿಯನ್ನು ಕೂಡ ಬಲಿ ತೆಗೆದುಕೊಂಡು ಮಗುವನ್ನು ತಬ್ಬಲಿಯ. ನ್ನಾಗಿ ಮಾಡಿದ್ದು ದುರದೃಷ್ಟಕರ ಸಂಗತಿ.

ಜಾನಕಿ ಕಿಲ್ಲಾರಿಯಲ್ಲಿ ಮೂರನಾಲ್ಕು ದಿನ ಇದ್ದುಕೊಂಡು ಆ ಮಗುವನ್ನು ಆಡಿಸಿ, ಕುಣಿಸಿ, ನಗಿಸಿ, ತನ್ನ ತಾಯಿ ವಾತ್ಸಲ್ಯದ ಎದೆಯಮೃತವನ್ನು ಮನಸಾರೆ ಉಣಿಸಿ ಹರ್ಷೋಲ್ಲಾಸದಲ್ಲಿ ನಕ್ಕು ನಲಿದಾಡಿದಳು. "ಉತ್ತರ ಪ್ರದೇಶ ಮಾತೆ ತನ್ನ ಗರ್ಭದಲ್ಲಿಡಗಿಸಿಕೊಂಡ, ನನ್ನ ಮುದ್ದು ಮುನ್ನಿಯನ್ನು ಮಹಾರಾಷ್ಟ್ರ ಮಾತೆ ದಯಪಾಲಿಸಿದ್ದಾಳೆ. ಬರಿದಾದ ನನ್ನ ಉಡಿಗೆ ಘನ ಆನಂದ ನೀಡಿದ್ದಾಳೆ" ಎಂದು ತುಂಬು ನಗೆಯಿಂದ ಹೇಳುತ್ತ ಧರ್ಮ ತೊಟ್ಟಿಲು ಹಿಡಿದ ಆ ತಾಯಿ ನಿಜಕ್ಕೂ ಧನ್ಯಳು। ಮಾನ್ಯಳು।

ಲೇಖಕರು:- ಅ. ಬಾ. ಚ- ಗುರೂಜಿ ನಾಗಣಸೂರ-413227 ತಾ-ಅಕ್ಕಲಕೋಟೆ ಜಿ-ಸೋಲಾಪುರ



# ವಿನಯಂ (ಚಿಂತನ)

"ನಿಮಗೆ ಬೇಕಾದುದನ್ನು ಖಡ್ಗದ ಬಲದಿಂದ ಪಡೆಯದೆ ನಗು-ನಗುತ್ತ ಪಡೆಯಿರಿ" ಎನ್ನುತ್ತಾನೆ ಷೇಕ್ಸ್‌ಪಿಯರ್. ಗಾಂಧೀಜಿ ಕೂಡ ಇದನ್ನೆ ಇನ್ನೊಂದು ರೀತಿಯಲ್ಲಿ ಆಚರಿಸಿ ತೋರಿಸಿದ್ದಾರೆ. ಆದರೆ ವಿನಯದಿಂದ ನಗುನಗುತ್ತಾ ಪಡೆಯಲು ಹೋದರೆ ಅದು ಇಂದು ವ್ಯಕ್ತಿಯ ದೌರ್ಬಲ್ಯವೆಂದೇ ಪರಿಗಣಿಸಲಾಗುತ್ತಿರುವದು ದುರಂತ. ಹಾಗಾಗಿ ಇಂದು ಎಲ್ಲೆಡೆಯಲ್ಲಿಯು ಕಾನೂನನ್ನು ಕೈಗೆತ್ತಿಕೊಳ್ಳುವದು ಕಾಣಬಹುದಾಗಿದೆ. ಹಾಗಾಗಿಯೇ ಅದೇ ಗಾಂಧೀಜಿಯವರೇ ವಿನಯ ಅಥವಾ ನಮ್ರತೆಯನ್ನು ಕುರಿತು ನಮ್ರತೆ ಮಾನವನಿಗಿರಬೇಕಾದ ಸಹಜ ಗುಣ. ಆದರೆ ಅದನ್ನು ಇತರರು ಹೇಡಿತನವೆಂದು ಭ್ರಮಿಸುವಷ್ಟು ಮಟ್ಟದಲ್ಲಿರಬಾರದು ಎನ್ನುವದು ಆಲೋಚಿಸುವಂತಹದು, ನಿಜ. ವ್ಯಕ್ತಿಯೊಬ್ಬ ತೀರ ಸರಳವಾಗಿ, ಉದಾರವಾಗಿ ವಿನಯವಂತನಾಗಿ ಕಂಡರೆ ಎಲ್ಲರೂ ಅವನ ಬೆನ್ನಮೇಲೇರಿ ಕುಳಿತುಕೊಳ್ಳಲು ಹಿಂದೆಗೆಯಲಾರರು. ಹಾವು ಕಚ್ಚಲಿ ಕಚ್ಚದಿರಲಿ ಬುಸ್ ಎನ್ನುವದರಿಂದಲೇ ಯಾರು ಅದರ ಸನಿಹಕ್ಕೆ ಹೋಗಲಾರರು, ಹಾಗಾಗಿ ಬುಸ್ ಎನ್ನುವದು ಸ್ವಲ್ಪ ಮಟ್ಟಿಗೆ ಅನಿವಾರ್ಯವೇನೊ ಅನಿಸುತ್ತದೆ.

ತೀರ ಸರಳತನವು ಪ್ರಸ್ತುತ ವ್ಯವಸ್ಥೆಯಲ್ಲಿ ಅಪಾಯಕಾರಿಯೇ ಆಗಿದೆ. ಹಾಗಾಗಿಯೇ ಚಾಣಕ್ಯನ ಮಾತು ಉಲ್ಲೇಖನಾರ್ಹ. ನೀಟಾಗಿ ಬೆಳೆದ ಗಿಡವು ಕೊಯ್ಯಲ್ಪಡುವದು; ಆದರೆ ಅಂಕುಡೊಂಕಾಗಿ ಬೆಳೆದ ಗಿಡವು ಕೊಡಲಿಯ ಬೀಸು-ವಿಕೆಯಿಂದ ಉಳಿದಿರುತ್ತದೆ! ತಾತ್ಪರ್ಯವಿಷ್ಟೆ ನಮ್ಮ ಸಹಜ ವಿನಯ, ನೇರ ಮುಗ್ಧತೆ ಅಪಾಯಕಾರಿಗಳಿಂದ ಹಾನಿಗಿಡಾಗಬಲ್ಲುದು ಎಂಬುದು. ವಿನಯವು ಸಕಲ ಸದ್ಗುಣಗಳ ತಳಹದಿ ಎಂಬುದನ್ನು ಯಾರು ಅಷ್ಟೊಂದು ಬೇಗ ಅಲ್ಲಗಳೆಯಲಾಗದು. ವಿನಯ ಇದ್ದವನಲ್ಲಿ ವಿದ್ಯೆ, ಪ್ರೀತಿ-ಪ್ರೇಮ, ಹೃದಯವಂತಿಕೆ, ಸಹಬಾಳ್ವೆಯ ನಂಬಿಗೆ ಪರಸ್ಪರ ಆತ್ಮಗೌರವಗಳ ನಂಬಿಕೆ ಇರುತ್ತದೆ. ಅಥವಾ ಪಡೆದುಕೊಳ್ಳುವಲ್ಲಿ ಅದು ನೆರವಾಗುತ್ತದೆ.

ಒಬ್ಬವ್ಯಕ್ತಿ ಅದೆಷ್ಟೆ ಕೆಟ್ಟವನಿದ್ದರೂ ಸಹ ಅವನಲ್ಲಿ ನಮ್ರತೆ ಇದ್ದರೆ ಅವನ ಬಗ್ಗೆ ಕೆಲವರಿಗಾದರು ವಿಶ್ವಾಸ-ಪ್ರೀತಿ ಇರುತ್ತದೆ. ಅವನ ದೌರ್ಬಲ್ಯಗಳೊಂದಿಗೆ ಅವನನ್ನು ಪ್ರೀತಿಸುತ್ತಾರೆ. ಆದರೆ ವಿನಯ-ವ್ಯಕ್ತಿಗೌರವಗಳಿಗೆ ಮಾನ್ಯತೆ ನೀಡದವನು ಅದೆಷ್ಟು ದೊಡ್ಡವನಾಗಿದ್ದರು ಅವನು ಬಹಳ ತೀವ್ರವಾಗಿ ತನ್ನ ಗೌರವವನ್ನು ಕಳೆದುಕೊಳ್ಳುತ್ತಾನೆ.

ಸಂಪನ್ನನಿಗೆ ಸಿಟ್ಟು ಬರಬಾರದು ಎಂಬ ಮಾತೊಂದಿದೆ. ಇಂತಹ ನಮ್ರರಾದ
ವಿನಯವಂತರಾದ ಮನುಷ್ಯರನ್ನು ಯಾರು ಅನ್ಯಥಾ ಬಹುಕಾಲ ನೋಯಿಸಬಾರದ
'ಸೌಮ್ಯ ಮನುಷ್ಯನ ಕ್ರೋಧಕ್ಕೆ ಅಂಜು' ಎಂದು ವಿಚಾರವಾದಿ ಲಾರ್ಡ್ ಬೈರನ
ಕರೆನೀಡಿದ್ದಾನೆ. ಸೌಮ್ಯ ವ್ಯಕ್ತಿ ಬೇಗ ಸಿಟ್ಟಿಗೇಳಲಾರ, ಅವನನ್ನು ಕೆಣಕಿದವನ
ಅವನು ಬಹುಕಾಲ ಕ್ಷಮಿಸಬಲ್ಲ. ಅದೇ ಅವನ ದೌರ್ಬಲ್ಯವೆಂದು ಮುಂದುವರಿದ
ಆ ವಿನಯವಂತನನ್ನು ಕೆಣಕುತ್ತಾ ಹೋದರೆ ಅದು ಘೋರ ಪರಿಣಾಮದ
ಮುಕ್ತಾಯವಾಗುತ್ತದೆ. ಕೆಣಕಿದವನು ಸ್ಮಶಾನ ಸೇರುತ್ತಾನೆ. ಸೌಮ್ಯವಂ
ಪಂಜರದ ಹಕ್ಕಿಯಾಗಿ ರೆಕ್ಕೆ ಕಳೆದುಕೊಳ್ಳುತ್ತಾನೆ. ಎರಡು ರೀತಿಯಲ್ಲೂ ನಷ
ವಿರುತ್ತವೆ. ಹಾಗಾಗಿ ಸೌಜನ್ಯವು ಮನುಷ್ಯ ಮನುಷ್ಯರನ್ನು ಹತ್ತಿರ ತರುತ್ತದ
ಅದಕ್ಕೆ ಹಣವೇನು ಖರ್ಚು ಬರುವದಿಲ್ಲ. ಆದರೆ ಆ ಸೌಜನ್ಯ ಎಲ್ಲರ ಹೃದಯವನ
ಹತ್ತಿರ ತರುತ್ತದೆ. ಶತ್ರುವನ್ನು ಮಿತ್ರರನ್ನಾಗಿಸುತ್ತದೆ.

ನಮ್ರವಂತನ ನಡವಳಿಕೆ-ಹೃದಯವಂತಿಕೆ ಇನ್ನೊಂದು ಅಂತಹ ಮನಸ್ಸಿಗೆನ
ಅದು ಅರ್ಥವಾಗಬಲ್ಲುದು. ಗರ್ವಿಷ್ಠರ ಹತ್ತಿರ ಬಹುಕಾಲ ವಿನಯದಿಂದಿರುವದ
ಅಗತ್ಯವಿಲ್ಲ. ವಿನಯವಂತಿಕೆ ಸಹಜಗುಣವಾಗಿರಬೇಕೇ ಹೊರತು ನಾಟಕೀಯವಾಗಿ
ಬಾರದು. 'ಅತಿವಿನಯಂ ಧೂರ್ತಲಕ್ಷಣಂ' ಎಂದು ಎಲ್ಲರಿಗೂ ಅರ್ಥವಾಗುತ್ತದ
ಇಂತಹ ಅತಿವಿನಯ-ನಮ್ರರನ್ನು ಮೊದಲು ದೂರವಿಡಬೇಕಾಗಿದೆ.

ಮನುಷ್ಯ ಎಷ್ಟು ಬುದ್ಧಿವಂತನಿದ್ದರೇನು? ಫಲ. ನಮ್ರತೆ ಇಲ್ಲದಿದ್ದರೆ. ಹಾಗಾ
ವಿನಯವಿಲ್ಲದವರ ಬುದ್ಧಿವಂತಿಕೆ ಜನೋಪಯೋಗಿಯಾಗದೇ ವ್ಯರ್ಥ ಹಾಳಾಗುತ್ತದ
ವಿನಯವಿಲ್ಲದ ಅಹಂಕಾರಿ ಬುದ್ಧಿವಂತ ತನ್ನಷ್ಟಕ್ಕೆ ತಾನು ಮಹಾ ಮೇಧಾವಿಯೆಂದ
ಕೊಂಡು ಸ್ವರತಿಯಲ್ಲೆ ಮಹಾನ್ ಸೂನ್ಯ (!) ಪೀಠಕಟ್ಟಿಕೊಂಡು ಭ್ರಮೆಯ
ಮಹಲು ಏರಿರುತ್ತಾನೆ. ಅದಕ್ಕೆ ಒಂದು ಸೂಜಿ ಮೊನೆ ಚುಚ್ಚಿದರು ಸಾಕು ಠುಸ
ಎಂದು ಆ ಪೀಠದಿಂದ ಉದುರಿಬಿದ್ದು ಹಾಸ್ಯಾಸ್ಪದನಾಗುತ್ತಾನೆ. ಅಹಂಕಾರಿಯಾ
ತನ್ನ ಗರ್ವದಲ್ಲೆ ತಾನಿದ್ದ ವ್ಯಕ್ತಿಗೆ ತನ್ನ ಸುತ್ತ ಆಗುತ್ತಿರುವ ಚಲನಶೀಲತೆಯು ಪ್ರಜ್ಞ
ಬಂದಿರುವದಿಲ್ಲ. ಹಾಗಾಗಿ ಕಾಲಿನ ಪೆಟ್ಟಿಗೆ ಕುಸಿದುಬಿದ್ದ ಗರ್ವಿಷ್ಠ ತಾನು ಚೆಲ್ಲಿ
ಹೇಸಿಗೆಯಲ್ಲೆ ಬಿದ್ದು ಒದ್ದಾಡಿ ಇತರರ ಮೈಗೂ ಅಷ್ಟಿಷ್ಟು ಸಿಂಪಡಿಸಿ ಕಾಲಿ
ಕರೆಯ ನೇಪಥ್ಯಕ್ಕೆ ಸರಿದು ಹೋಗುತ್ತಾನೆ. ಆ ಸರಿಯುವಿಕೆಯಲ್ಲೆ ಸೌಜನ್ಯ
ಹೊಸ ಹೂ....ಅರಳುವಂತಾಗಬೇಕು.

ಲೇಖಕರು:- ಸಿದ್ಧರಾಮ ಹೊನ್ಕಲ್, ಸಂ|| ಹೊಸದಿಕ್ಕು, ಶಹಾಪುರ-585223

# ಇಂದಿನ ಸಮಾಜ ಮತ್ತು ಶಿಕ್ಷಕ

## (ಡಾ|| ರಾಧಾಕೃಷ್ಣನ್‌ರವರ ಸವಿನೆನಪಿಗಾಗಿ)

**ಇಂದಿನ ಸಮಾಜ**

ಇಂದಿನ ಸಮಾಜ ಎಲ್ಲಾ ವಲಯುಗಳಲ್ಲೂ ಮಹತ್ತರ ಬದಲಾವಣೆಗಳನ್ ಕಂಡಿದೆ. ಈ ಆಧುನಿಕ ಸಮಾಜದ ಚಿತ್ರವನ್ನು ಕೊಡುವುದು ಒಂದು ರೀ ದುಸ್ಸಾಹಾಸವೆ ಸರಿ, ಎಲ್ಲಾ ವಲಯಗಳಲ್ಲೂ ಪ್ರಗತಿ ಸಾಧಿಸಿದ್ದೇವೆ, ಆದ ಮೌಲ್ಯಗಳ ಅಧಃಪತನವನ್ನು ಕಾಣುತ್ತಿದ್ದೇವೆ, ಅನೇಕ ಬಾರಿ ಈ ಸಮಾಜವನ ನಾಗರೀಕ ಸಮಾಜವೆಂದು ಕರೆಯಬಹುದೆ? ಎನ್ನಿಸುವುದು. ತೀವ್ರಸ್ವರೂಪ ಅಸಮಾನತೆ, ಬಡತನ, ನಿರಕ್ಷರತೆ, ನಗರ ಮತ್ತು ಹಳ್ಳಿಗಳ ಅಂತರ, ಮತಾಂಧ ರಕ್ತಪಾತ, ಯುದ್ಧಬೀತಿ, ಪರಿಸರ ಮಾಲಿನ್ಯ, ಲೌಕಿಕತೆಯುವಾದ, ಇವೆಲ್ಲ ಮಾನವನಲ್ಲಿ ಗೊಂದಲ ಉಂಟು ಮಾಡಿದೆ. ಇವೆಲ್ಲಕ್ಕೂ ಮಿಗಿಲಾಗಿ ಸೃಷ್ಟಿ ಕಿರೀಟಪ್ರಾಯುವಾದ (the crown of creation) ಹಾಗೂ ಸಮಾಜ ಬೆನ್ನೆಲುಬಾದ ಮಾನವ ಜಿಗುಪ್ಸೆ ಮತ್ತು ಸಾಮಾಜಿಕ ಅಭದ್ರತೆಗಳಿಂದ ದಿಗ್ಭ್ರಾ ನಾದ್ದಾನೆ. ಮೂಕ ಪಕ್ಷಿಯಂತೆ ಕವಲೊಡೆದ ಈ ಸಮಾಜದ ಸಂಸ್ಕೃತಿ ಕಾರ್ಮೋಡವನ್ನು ಅಸಹಾಯಕನಾಗಿ ವೀಕ್ಷಿಸುತ್ತಿದ್ದಾನೆ.

ಇಂಥಹ ದಿಕ್ಕೆಟ್ಟ ಪರಿಸ್ಥಿತಿಯಲ್ಲಿರುವ ಯುವ ಪೀಳಿಗೆಯ ತೊಳಲಾಟವಂತ ಹೇಳತೀರದು. ನಾಯಿಕೊಡೆಗಳಂತೆ ಬೆಳೆಯುತ್ತಿರುವ ಶಾಲಾಕಾಲೇಜುಗ ಆಡಂಬರದ ಅಕ್ಷರಸ್ಥರನ್ನೂ ಹೊರತರುವ ಕಾರ್ಖಾನೆಗಳೇ ಸರಿ "The succes of Indian story of education is the scuccess of numb only". ಈ ಮಾತು ಅಕ್ಷರ ಸಹಾ ಸತ್ಯವಾಗುತ್ತಿದೆ.

ಪ್ರೌಢಶಿಕ್ಷಣ ಪಡೆದ ವಿದ್ಯಾವಂತರಾಗಲಿ, ಉನ್ನತ ಶಿಕ್ಷಣ ಪಡೆದ ಪಂಡಿತರಾಗ ನಿರುದ್ಯೋಗದ ಉದ್ದದ ಸಾಲಿನಲ್ಲಿ ನಿಂತು ತಮ್ಮ ವಯಸ್ಸನ್ನು ಹೆಚ್ಚಿಸಿ ಕೊ ಬೇಕಷ್ಟೆ! ಇನ್ನು ಯುವ ಪೀಳಿಗೆ, ಉದ್ಯೋಗ ಒದಗಿಸುವ ಸರ್ಕಾರ ಪ್ರಕಟಣೆಗಳ ಕಣ್ಣೊರೆಸುವ ತಂತ್ರಗಳಾಗಿದ್ದು ವಾಸ್ತವ ಸ್ಥಿತಿಗೆ ಬಹುದೂರವಾಗಿದ್ದಾವೆ.

### ಎಂಥಹ ಶಿಕ್ಷಣ ಬೇಕು?

ಇಂದಿನ ಪರಿಸ್ಥಿತಿಯಲ್ಲಿ ಮಾಹಿತಿ ಕೊಡುವ ವಿದ್ಯೆಗಿಂತಲೂ ಜ್ಞಾನ ಮ ಜಾಣತನ ಕೊಡುವ ವಿದ್ಯೆ ಮುಖ್ಯ. ವಿವೇಚನೆ ಮತ್ತು ವಿಮರ್ಶೆ ಮಾಡ ಶಿಕ್ಷಣ ಇಂದು ಪ್ರಸ್ತುತ. ಶಿಕ್ಷಣ ಪಡೆದ ವ್ಯಕ್ತಿಗಳು ಸ್ವಾವಲಂಬನೆಯಲ್ಲಿ ನಂ

ಉಳ್ಳವರಾಗಿ ಬದುಕಿನ ಸವಾಲುಗಳನ್ನು ಎದುರಿಸುವ ಸಾಮರ್ಥ್ಯ ಹೊಂದುವ ಶಿಕ್ಷಣ ತರಬೇತಿ ಮುಖ್ಯ. ನಿರಾಡಂಬರ ಮತ್ತು ಮಾನವೀಯ ಗುಣಗಳನ್ನು ಮೈಗೂಡಿಸುವ ಮತ್ತು ಸೃಜತೆಯನ್ನು ಕಲಿಸುವ ಶಿಕ್ಷಣ ಅವಶ್ಯಕ. ಅತ್ಯಂತ ನಾಗರಿಕ ಸಮಾಜ (Super civilized) ಎಂದು ಹೇಳಿಕೊಳ್ಳುವಾಗ 20ನೇ ಶತಮಾನದಲ್ಲಿ ಹಸಿವಿನಿಂದ ಸಾಯುತ್ತಿರುವ ಜನರಿಗೆ ಅನ್ನಕೊಡುವ ಶಕ್ತಿ ಸಾಮರ್ಥ್ಯಗಳನ್ನು ಕೊಡುವ ಶಿಕ್ಷಣ ಮೂಲವಾಗಬೇಕು. ಅಂತಹ ಪರಿಸ್ಥಿತಿ ಇಂದು ಹೆಚ್ಚುತ್ತಿದೆ. ದುಡಿಮೆಯ ಸಂಸ್ಕೃತಿ (work Culture)ಯ ಗಂಧವೇ ಗೊತ್ತಿಲ್ಲದ ಇಂದಿನ ಜನಾಂಗಕ್ಕೆ ದುಡಿಮೆಯೇ ಜೀವನ, ಕಾಯಕವೇ ಕೈಲಾಸ, Work must be a way of life, Work is Workship ಎಂಬ ಸ್ಫೂರ್ತಿ ತುಂಬುವಂತಹ ಶಿಕ್ಷಣದ ಅಗತ್ಯವಿದೆ ಅತಿ ಮುಖ್ಯವಾಗಿ ಎಲ್ಲ ತರಹದ ಸಂಕುಚಿತ ಸಂಕೋಲೆಗಳನ್ನು ಬದಿಗೊತ್ತಿ, ಸ್ನೇಹ ಭ್ರಾತೃತ್ವದಿಂದ ಮಾನವರನ್ನು ಮಾನವರಾಗಿ ಬಾಳುವ ಮನಃಶಕ್ತಿಯನ್ನು ತುಂಬುವ ಶಿಕ್ಷಣಬೇಕು. ಈ ಸಂದರ್ಭದಲ್ಲಿ ಶ್ರೀ ರಾಧಾಕೃಷ್ಣನ್ ಅವರ ಮಾತು ಪ್ರಸ್ತುತ. "If education is to help us to meet the moral challenges of the age and play its part in the life of the Community, it should be liberating and life givning. If must give a basic meaning to personality and existenc and equip us with the power to over Come Spiritual inertia and Spiritual sensitivity".

ಶಿಕ್ಷಣದ ಗುರಿಗಳು ಕಾಲ ಕಾಲಕ್ಕೆ ಬದಲಾಗುತ್ತವೆ. ಶಿಕ್ಷಣವು ವ್ಯಕ್ತಿಗೆ ತನ್ನ ಶಾರೀರಕ ಮತ್ತು ಮಾನಸಿಕ ಆರೋಗ್ಯವನ್ನು ಕಾಪಾಡಿಕೊಳ್ಳುವ ಶಕ್ತಿ ಕೊಟ್ಟು ತನ್ನ ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಮತ್ತು ಸಮಾಜದಲ್ಲಿ ಉತ್ತಮ ಪೌರನಾಗಿ ಬಾಳುವಂತೆ ಮಾಡಬೇಕು.

## ಶಿಕ್ಷಕ ಮತ್ತು ಅವನ ಕರ್ತವ್ಯಗಳು

ಶಿಕ್ಷಕ ಮೊದಲನೆಯದಾಗಿ ಜ್ಞಾನ ಸಂಪನ್ನನಾಗಿರಬೇಕು. ಜೊತೆಗೆ ಸಮಾಜದ ಪ್ರಗತಿಯಲ್ಲಿ ಪುರೋಗಾಮಿ ಪಾತ್ರವನ್ನು ವಹಿಸಬೇಕು. He must be a master of Knowledge and should play a progressive role. ಇಂದಿನ ಶಿಕ್ಷಕ ತನ್ನ ವಿಷಯದಲ್ಲಿ ಪರಿಣಿತನಾದರೆ ಸಾಲದು. ಆತ ಬಹುಮುಖ ಪ್ರತಿಭೆ ಉಳ್ಳವನಾಗಬೇಕು. (Teacher must be a multi disciplinary entity,) ಇಂದಿನ ಪರಿಸ್ಥಿತಿಯಲ್ಲಿ ಜ್ಞಾನ ಬೋಧನೆಯ ಜೊತೆಗೆ, ಶಿಕ್ಷಕ ವಿದ್ಯಾರ್ಥಿಗಳಲ್ಲಿ ತೆರೆದ ಮನಸ್ಸನ್ನು ಮತ್ತು ಆತ್ಮಸ್ಥೈರ್ಯವನ್ನು

ಬೆಳೆಸುವಂತಹನಾಗಬೇಕು. ಇಂದಿನ ಶಿಕ್ಷಕ ಇಂದಿನ ಯುವ ಪೀಳಿಗೆಯಲ್ಲಿ ದೇಶ ಭಕ್ತಿಯ ಜೊತೆಗೆ ಅಂತರಾಷ್ಟ್ರೀಯ ಮನೋಭಾವನೆಗಳನ್ನು ಮೈಗೂಡಿಸಿದರೆ ಮಾತ್ರ ವಿಶ್ವಶಾಂತಿ ಮತ್ತು ವಿಶ್ವದ ಉಳಿವು ಸಾಧ್ಯವೆಂಬ ಅರಿವು ಮೂಡಿಸಬೇಕು.

ತ್ರಿ'ಡಿ' ಸಂಸ್ಕೃತಿ (ಡ್ರಗ್ಸ್, ಡ್ರಿಂಕ್ಸ್, ಅಂಡ್ ಡಾನ್ಸ್) ಹರಡಿ ಯುವ ಪೀಳಿಗೆಯನ್ನು ದಿಕ್ಕು ತಪ್ಪಿಸಿ, ತನ್ನ ಜೀವನವನ್ನು ಸಾಗಿಸಲು ಅಸಮರ್ಥನಾಗಿ ಮಾಡಿರುವ ಈ ಯುಗದಲ್ಲಿ, ಜೀವನಕ್ಕೆ ಒಂದು ಅರ್ಥಕೊಟ್ಟು, ಆಶಾಭಾವನೆಯನ್ನು ತುಂಬಿ, ಬಾಳನ್ನು ಹಸನುಗೊಳಿಸಿಕೊಳ್ಳುವ ಶಕ್ತಿಯನ್ನು ತುಂಬಬಲ್ಲಾ ವ್ಯಕ್ತಿ ಇಂದಿನ ನಿಜವಾದ ಶಿಕ್ಷಕನಾಗುತ್ತಾನೆ.

ಇಂದಿನ ಶಿಕ್ಷಕ "a social designer and a sustainer he is a critic of society and he has to suggest remedies ಇಂದಿನ ಶಿಕ್ಷಕ ಸಮಾಜಿಕ ಬದಲಾವಣೆಯ ರುವಾರಿಯಾಗಬೇಕು.

ಇವುಗಳೆಲ್ಲಕ್ಕೂ ಮಿಗಿಲಾಗಿ ಜೀವನದ ಪರಮಾರ್ಥವನ್ನು ತಿಳಿಸಿ. ಧರ್ಮ, ದಾನ, ದಯಾ ಗುಣಗಳನ್ನು ಶಿಕ್ಷಣಾರ್ಥಿಗಳಲ್ಲಿ ಮೈಗೂಡಿಸುವನು ಇಂದಿನ ಶಿಕ್ಷಕನಾಗಬೇಕು.

ಲೇಖಕರು :– ಎಂ. ಬಿ. ಸದಾಶಿವಯ್ಯ, ಆಂಗ್ಲಭಾಷಾ ಉಪನ್ಯಾಸಕರು,
ಸಿದ್ಧಗಂಗಾ ಪುರಷರ ಕಾಲೇಜು ತುಮಕೂರು.

# ನಾವು ಮತ್ತು ನಮ್ಮ ಚಲನಚಿತ್ರಗಳು

ಮಾನವನ ಮನೋರಂಜನೆಯ ಮಾಧ್ಯಮಗಳಲ್ಲಿ ಚಲನಚಿತ್ರಗಳು ಅತ್ಯಂತ ಪ್ರಭಾವಶಾಲಿ; ಇಂದಿನ ಜನಾಂಗ ಅವುಗಳಿಗೆ ಸಂಪೂರ್ಣವಾಗಿ ಮಾರುಹೋಗಿದೆ; ಆಧುನಿಕ ಬದುಕಿನಲ್ಲಿ ಚಲನಚಿತ್ರಗಳಿಗೆ ವಿಶೇಷ ಸ್ಥಾನವಿದೆ; ಹಳೆಯ ತಲೆಮಾರಿನವರೂ ಸಹ ಅದರ ದಟ್ಟವಾದ ಪ್ರಭಾವಕ್ಕೆ ಸಿಲುಕಿ ತಮ್ಮೆಲ್ಲ ಮಡಿವಂತಿಕೆ ಕಳಚಿ ಅವುಗಳ ಆಕರ್ಷಕತೆಗೆ ನಿಜಕ್ಕೂ ಒಗ್ಗಿ ಹೋಗಿದ್ದಾರೆ.

ಚಲನಚಿತ್ರಗಳ ಜನಪ್ರಿಯತೆಯಿಂದ ಪ್ರೇರಿತರಾದ ವಣಿಕವರ್ಗ ಅದರಲ್ಲಿ ಹಣ ತೊಡಗಿಸಲು ಪೈಪೋಟಿಗಿಳಿದು ಇಂದು ಚಲನಚಿತ್ರ ತಯಾರಿಕೆ ಒಂದು ಪ್ರಬಲವಾದ ಉದ್ಯಮವಾಗಿದೆ; ಒಬ್ಬರಿಗಿಂತ ಒಬ್ಬರು ಹಣ ಹೂಡಲು ಮುಂದಾಗಿ ಭಾರೀ ಮೊತ್ತದ ಸಂಪತ್ತೇ ಇಲ್ಲಿ ಸಂಚಯವಾಗಿ ಅದನ್ನೂ ಮತ್ತೆ ವಾಪಸು ಪಡೆಯಲು ವಿವಿಧ ತಂತ್ರಗಳ ಶರಣಾಗಿ ನಿರ್ಮಾಪಕರು ಜನರ ರಸಿಕತೆಯ ಕಡೆಗೇ ಪೂರ ವಾಲುತ್ತಾ ಕಲೆಯ ಹೆಸರಲ್ಲಿ ಇಲ್ಲಸಲ್ಲದ ಮಸಾಲೆ ತುಂಬುವಲ್ಲಿ ಸ್ಪರ್ಧೆಗಿಳಿದು ಮಾಧ್ಯಮ ಸಂಪೂರ್ಣ ಭ್ರಷ್ಟವಾಗಿದೆ.

## ❁ ವಿಷಮ ವಲಯ ❁

"ಕಲಾ ದಾಸೋಹ"ದಲ್ಲಿ ನಿರ್ದೇಶಕ ಪ್ರಾಮಾಣಿಕವಾಗಿ ತನ್ನ ಬದುಕನ್ನೇ ಧಾರೆಯೆರೆಲು ಮೀಸಲಿಟ್ಟರೂ ಸಹ ಬಂಡವಾಳ ತೊಡಗಿಸುವವರು ನಿರ್ದೇಶಕನನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಳ್ಳುತ್ತಾ ಇಡೀ ಮಾಧ್ಯಮ ಇಂದು ಕಲುಷಿತವಾಗಿದೆ. ನಮ್ಮ ಸಮಾಜಕ್ಕೆ ಬೇಡವಾದ ಕೆಟ್ಟ ವಿಷಯಗಳೆಲ್ಲವೂ ನುಸುಳಿ ಆರೋಗ್ಯವಂತ ಸಮುದಾಯಕ್ಕೆ ವಾಸಿ ಮಾಡಲಾಗದ ಅನಿಷ್ಟತೆಯ ಅರ್ಬುದ ಹಿಡಿದಿದೆ; ಹೀಗಾಗಿ ಇಂದು ನಾವು ನೇತ್ಯಾತ್ಮಕ ಹಾದಿ ತುಳಿದಿದ್ದೇವೆ.

ಚಲನಚಿತ್ರ ನಿರ್ಮಾಣದ ಪ್ರಾರಂಭ ಕಾಲದಲ್ಲಿ ಪೌರಾಣಿಕ, ಐತಿಹಾಸಿಕ ಹಾಗೂ ವಾಸ್ತವಿಕ ವಿಷಯಗಳು ನಿರ್ದೇಶಕರ ಗಮನಸೆಳೆದು "ಕಲಾರಾಧನೆ"ಯೇ ಆಗ ಪ್ರಮುಖವಾಗಿತ್ತು. ಉದ್ಯಮ ಬೆಳೆದ ಹಾಗೆ ತಾಂತ್ರಿಕತೆ ವಿಶೇಷವಾಗಿ ಮುನ್ನಡೆದ ಹಾಗೆ.ವೈಭವೋಪೇತ ನಿರ್ಮಾಣಗಳು ತಲೆಯೆತ್ತಿ "ಚಿತ್ರದ ಆಂತರಿಕ ಹದ" ತಪ್ಪಿ ಆಡಂಬರ, ಅದ್ದೂರಿ, ತಂತ್ರ ವಿಪರೀತವಾಗಿ 'ಕಲೆ' ಹಿಂದೆ ಸರಿಯಲಾರಂಭಿಸಿತು.

## ❁ ರೋಚಕ ಮಸಾಲೆಗಳು ❁

ಈ ಉದ್ಯಮದಲ್ಲಿ 'ಹುಟ್ಟುವಳಿ' ಚೆನ್ನಾಗಿದೆಯೆಂದು ಅರಿತ ಧನವಂತರು ಮತ್ತಷ್ಟು ಧನಿಕರಾಗಲು ಮೆಲ್ಲಗೆ ಕುತಂತ್ರಗಳ ಮಾಡುತ್ತಾ ಮಾನವನ ಮನಸ್ಸನ್ನೂ

ಸುಲಭವಾಗಿ ಸೆಳೆಯುವ 'ಕಾಮು'ದಂಥ ವಿಷಯವನ್ನು ರೋಚಕವಾಗಿ ನಿರೂಪಿಸಲುವಲ್ಲಿ 'ತೆರೆಯ ಹಿಂದೆ' ಕೆಲಸ ಮಾಡುವ ತಂತ್ರಜ್ಞರನ್ನೂ ಬಳಸಿಕೊಳ್ಳಲು ತೊಡಗಿದರು. ಹೀಗಾಗಿ 'ಶೃಂಗಾರ'ದ ಬದಲು 'ಅಶ್ಲೀಲ', ಹಾಸ್ಯದ ಬದಲು 'ಪೋಲಿ ಮಾತು' ಅಭಿನಯದ ಬದಲು ಹೆಣ್ಣಿನ ಮೈಮಾಟದ ಬಹಿರಂಗ ಪ್ರದರ್ಶನ ಕ್ರಮ ಕ್ರಮೇಣ ಚಿತ್ರಗಳಲ್ಲಿ ವ್ಯಾಪಕವಾಗಿ ಈಗ ಕಾಮೋದ್ದೀಪಕ ಮಸಾಲೆ ಚಿತ್ರಗಳೇ ಧಾಳಿ ಮಾಡುತ್ತಿವೆ.

ವಾಸ್ತವ ತಿಳಿಸಬೇಕಾದ ನಿರ್ದೇಶಕ ಅತಿರೇಕಗಳಿಗೆ ಹೋಗಿ ವಿಪರ್ಯಾಸಗಳನ್ನು ಕಕ್ಕತೊಡಗಿದ; ಅಭಿರುಚಿಯೇ ಹಾಳಾಗಿ ಯುವಜನರ ಚಿತ್ತ ಪ್ರಚೋದಕ ಚಿತ್ರಗಳ ಹಾವಳಿ ಅತಿಯಾಯಿತು; ಹಿಂಸೆ ಮನೆ ಮಾಡಿತು; ನ್ಯಾಯ, ನೀತಿ, ಸತ್ಯ ಧರ್ಮ ಚಾರಿತ್ರ ಎಲ್ಲ ಮೌಲ್ಯಗಳೂ ಶಿಥಿಲವಾಗಿ ಇತ್ಯಾತ್ಮಕ ಧೋರಣೆಗಳೇ ಚಲನಚಿತ್ರ ನಿರ್ಮಾಣದಲ್ಲಿ ಸಂಪೂರ್ಣ ಇಲ್ಲವಾಯಿತು. ಆದ್ದರಿಂದ ಈಗಿನ ಸಾಮಾಜಿಕ ಚಿತ್ರಗಳು ಪೀತ ಮನೋಧರ್ಮ ಬಿಂಬಿಸುತ್ತಿವೆ.

## ❁ ಉತ್ಪಾತಗಳ ಸರಮಾಲೆ ❁

ಕ್ಯಾಬರೆ ಹೆಸರಲ್ಲಿ ನಗ್ನತೆ ಮಿಂಚಿತು; ಹೊಡೆದಾಟದ ರಂಜನೆ ಹೆಸರಲ್ಲಿ ಹಿಂಸೆ ತಾಂಡವವಾಡಿತು; ಹೆಣ್ಣನ್ನು ಕೀಳಾಗಿ ಚಿತ್ರಿಸಿತು. ಅಧರ್ಮದ ಅನಿಷ್ಟಗಳ ಮಟ್ಟ ಹಾಕಲು ಹೋದ ನಾಯಕ ಪಾತ್ರಗಳು ತಾವೇ ಕಾನೂನು ಕೈಗೆತ್ತಿಕೊಂಡ ವಿಪರ್ಯಾಸದ ಸಂಗತಿಗಳು ಢಾಳವಾಗಿ ಕಾಣಿಸಿಕೊಂಡವು. ಹೊಸದನ್ನು ನೀಡಿ ಪ್ರೇಕ್ಷಕರನ್ನು ಸಹಸ್ರಗಟ್ಟಲೆ ಸೆಳೆಯಲು ಬ್ಯಾಂಕ್ ದರೋಡೆ, ರೈಲ್ವೆಲೂಟಿ, ಕಾಳ ಸಂತೆಯ ವಿಜೃಂಭಿತ ಚಿತ್ರಗಳೇ ಯದ್ವಾತದ್ವ ಮೆರೆದು ಜನ ಕಕ್ಕಾವಿಕ್ಕಿಯಾದರು. 'ಸಹೃದಯ' ಮಾಯವಾದ ಚಲನಚಿತ್ರಗಳು ಖದೀಮತನ ಕಲಿಸುವ ಅಖಾಡ ಗಳಾದವು. ಜನರನ್ನು ನಕ್ಕು ನಗಿಸಲೆಂದೇ ಪೋಲೀಸರನ್ನೂ ದಡ್ಡರಂತೆ ಚಿತ್ರಿಸ ಲಾಯಿತು, ಶಾಲಾ ಕಾಲೇಜು ವಾತಾವರಣವೆಂದರೆ ಹಿಂದೆಂದೂ ಇರದಂಥ ಮುಕ್ತ ಆವರಣಗಳೇನೂ ಎಂಬಂತೆ ನಿರ್ದೇಶಕ ನಿರ್ಮಾಪಕರ ಸ್ವಕಪೋಲ ಕಲ್ಪಿತ ಚಿತ್ರ ಗಳಾದವು. ಸತ್ಯ ಸೇಣು ಕಂಡಿತು, ವಂಚನಾ ವಿಧಾನಗಳು ಪ್ರೇಕ್ಷಕ ಮಹಾಶಯ ವಿಕಲ್ಪಗಳನ್ನೇ ಕಲಿತುಕೊಳ್ಳುವಂತಾಯಿತು. ಕಲೆಯು ಕೊಲೆಯಾಯಿತು, ಸೆನ್ಸಾರ್ ಮಂಡಳಿ ನಿದ್ದೆ ಹೋಯಿತು. ಯುವಜನಕ್ಕೆ ಅಪಮೌಲ್ಯಗಳೇ ಅತ್ಯಂತ ಪ್ರಿಯವಾಯಿತು. ಒಟ್ಟಾರೆ ಉತ್ಪಾತಗಳ ಸರಮಾಲೆ ಇಂದು ಕಲೆ ಸಾಹಿತ್ಯ ಸಂಗೀತ ಅಭಿನಯಗಳ ಹೆಸರಲ್ಲಿ ನಂಜಿನೂಟವನ್ನೇ ಹಣಿಸುವಂತಾಯಿತು!

ಈಗ ಎಲ್ಲ ತಂದೆ ತಾಯಂರಿಗೆ ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಗಾಬರಿಯಾಗಿದೆ; ಸಿನಿಮಾ ಮಾಧ್ಯಮ ಅತಿರೇಕಗಳ ಅಪ್ರಬುದ್ಧ ಹಾಲಾಹಲದ ಹೊಳೆ ಹರಿಸಿದೆ, ತಿಳಿವಳಿಕೆ ವಿಸ್ತರಿಸುವ, ನೀತಿ ಬೋಧಕ, ವಾಸ್ತವ ಘಟನೆಗಳ, ಬದುಕಿಗೆ ಹತ್ತಿರವಾದ, ಮೌಲ್ಯ ಪ್ರತಿಪಾದಕ ಚಿತ್ರಗಳ ಆವಶ್ಯಕತೆ ಈಗಿದೆ. ಈ ದಿಸೆಯಲ್ಲಿ ನಮ್ಮ ನಿರ್ಮಾಪಕ ನಿರ್ದೇಶಕರು ಇನ್ನಾದರೂ ಯೋಚಿಸಿಯಾರೇನೋ ಎಂದು ಹತಾಶಯ ಅಂಚಿನಲ್ಲೂ ಆಶಾಭಾವನೆಯಿಂದ ಕಾದುನೋಡಬೇಕಾಗಿದೆ.

(ಸೌಜನ್ಯ: ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ–೫೮೩೨೭೧)

ಲೇಖಕರು: ಶ್ರೀ ದೊಡ್ಡರಂಗೇಗೌಡ, "ಕಾವ್ಯಶ್ರೀ" ದತ್ತಾತ್ರೇಯ ಆಶ್ರಮದ ಹತ್ತಿರ, ವಿಶ್ವೇಶ್ವರಯ್ಯ ಬಡಾವಣೆ, ಹೊಸಕೋಟೆ, ಬೆಂಗಳೂರು ಜಿಲ್ಲೆ.



**ಕರ್ನಾಟಕ ಸರ್ಕಾರ**

# ಸ್ವಾತಂತ್ರ್ಯ ಕನಸುಗಳು ಇಲ್ಲಿ ನನಸಾಗುತ್ತಿವೆ

ಬಿಡುಗಡೆಯಾದ ನಾಡಿನಲ್ಲಿ ಎಲ್ಲರೂ ಸಮಾನರು, ಸಮಾನ ಹಕ್ಕು ಹೊಂದಿರುವರು, ಸರ್ವರಿಗೂ ಸಮಬಾಳು ಇದು ಕವಿವರ್ಯರ ಆಶಯ. ಈ ಆಶಯವನ್ನು ಸಾಕಾರಗೊಳಿಸಿ ಸಮಾಜ ಮತ್ತು ಸಮುದಾಯವನ್ನು ಸಮೃದ್ಧಗೊಳಿಸುವುದೇ ನಮ್ಮ ಸರ್ಕಾರದ ಪರಮಧ್ಯೇಯ. ಈ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟು ಸಮುದಾಯದ ಆರೋಗ್ಯ, ಶಿಕ್ಷಣ ಸಾಕ್ಷರತೆ, ಬಡತನದ ನಿರ್ಮೂಲನೆ ವಸತಿ ಸೌಲಭ್ಯ ಕಲ್ಪನೆಗೆ ಆದ್ಯತೆ.

ಜವಾಬ್ದಾರಿಯುತ, ಕ್ರಿಯಾಶೀಲ, ಸ್ವಚ್ಛ ಮತ್ತು ಪಾರದರ್ಶಕ ಆಡಳಿತದ ಮೂಲಕ ಜನಸಮುದಾಯಕ್ಕೆ ಸ್ಪಂದಿಸುತ್ತಿರುವ ನಮ್ಮ ಸರ್ಕಾರ ವಿವಾದಗಳಿಂದ ಗಾವುದ ದೂರ ಜನಮನಕ್ಕೆ ಬಲು ಹತ್ತಿರ. ಮಾನ್ಯ ಮುಖ್ಯ ಮಂತ್ರಿ ಶ್ರೀ ಎಂ. ವೀರಪ್ಪಮೊಯಿಲಿ ಅವರ ನೇತೃತ್ವದ ಸಾಧಿಸಿರುವ ಮೈಲಿಗಲ್ಲುಗಳು ಹಲವು. ಶೋಷಣಾರಹಿತ ದಕ್ಷ ವ್ಯವಸ್ಥೆ ನಿರ್ಮಿಸಲು ಸಾಮಾಜಿಕ ಆರ್ಥಿಕ ಹಾಗೂ ಆಡಳಿತ ಕ್ಷೇತ್ರಗಳಲ್ಲಿ ಜಾರಿ ಮಾಡಿರುವ ನಿರ್ಣಯಗಳು ಜನಮನ್ನಣೆಗೆ ಪಾತ್ರ. ಕೋಮು ಸೌಹಾರ್ದವನ್ನು ಕಾಪಾಡಿಕೊಂಡು ಪ್ರಗತಿಗೆ ಮಾರಕ ವಾತಾವರಣ ಸೃಷ್ಟಿ. ಹಿಂದುಳಿದವರ ಅಲ್ಪಸಂಖ್ಯಾತರ, ಪರಿಶಿಷ್ಟಜಾತಿ ವರ್ಗಗಳ ಮತ್ತು ಸಮಾಜದ ಎಲ್ಲಾ ಸ್ತರಗಳ ದುರ್ಬಲ ಹಾಗೂ ಬಡಜನರ ಏಳಿಗೆಯನ್ನೇ ಏಕೈಕ ಉದ್ದೇಶವಾಗಿಟ್ಟುಕೊಂಡು ಶ್ರಮಿಸುತ್ತಿರುವ ಸರ್ಕಾರ ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವದ ಸಂದೇಶವನ್ನು ಚಾಚೂ ತಪ್ಪದೆ ಪಾಲಿಸುತ್ತದೆ.

**ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ಸರ್ಕಾರ ಘೋಷಿಸಿರುವ ನೂತನ ಕಾರ್ಯಕ್ರಮ** :– 2 ಲಕ್ಷ ಗೃಹ ನಿವೇಶನ ಹಾಗೂ 1 ಲಕ್ಷ ಮನೆಗಳನ್ನು ಹಂಚಿಕೆ ಪ್ರಸಕ್ತ ಸಾಲಿನಲ್ಲಿ ಆಶ್ರಯ ಮನೆಗಳನ್ನು ಹಂಚಲು 1 ಲಕ್ಷ ಫಲಾನುಭವಿಗಳನ್ನು ಗುರುತಿಸುವುದು. ವೃತ್ತಿ ಶಿಕ್ಷಣ ಹಾಗೂ ಸ್ನಾತಕೋತ್ತರ ಶಿಕ್ಷಣ ಪಡೆಯುತ್ತಿರುವ ಪರಿಶಿಷ್ಟ ಜಾತಿ ಮತ್ತು ವರ್ಗಗಳ ವಿದ್ಯಾರ್ಥಿಗಳಿಗೆ ಮಾಹೆಯಾನ ಭೋಜನ ವೆಚ್ಚ 400 ರೂ. ಗಳಿಗೆ ಏರಿಕೆ. ಪ್ರತಿ ಜಿಲ್ಲೆಗೊಂದರಂತೆ 30 ಲಕ್ಷ ರೂ. ವೆಚ್ಚದಲ್ಲಿ ಪಿ. ಯು. ಸಿ. ಕಾಲೇಜು. ವಿದ್ಯಾರ್ಥಿಗಳಿಗಾಗಿ 20 ಹೊಸ ವಿದ್ಯಾರ್ಥಿ ನಿಲಯಗಳ ಸಾಧನೆ. ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ

ಎಂ. ಫಿಲ್ ಮತ್ತು ಪಿ.ಹೆಚ್.ಡಿ. ಸಂಶೋಧನಾ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡಲು ಕ್ರಮವಾಗಿ ರೂ. 8 ಸಾವಿರ ಹಾಗೂ 10 ಸಾವಿರದಂತೆ ನಗದು ಪುರಸ್ಕಾರ ಯೋಜನೆ. ಈ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ಭೋಜನ ಮತ್ತು ವಸತಿ ವೆಚ್ಚಗಳನ್ನು ಪಡೆಯಲು ಆದಾಯ ಮಿತಿ ತೆಗೆದು ಹಾಕುವ ನಿರ್ಧಾರ. ಇದಕ್ಕಾಗಿ 18 ಕೋಟಿ ರೂ. ಹೆಚ್ಚುವರಿ ಹಣ. ಮೊದಲ ಬಾರಿಗೆ ಡಾ|| ಅಂಬೇಡ್ಕರ್ ವಸತಿ ಯೋಜನೆ ಯಡಿ 1 ಲಕ್ಷ ಮನೆಗಳ ನಿರ್ಮಾಣ. ವಿಶೇಷ ಕಾರ್ಯಕ್ರಮವಾಗಿ ಪ್ರತಿ ವಿಧಾನ ಸಭಾ ಕ್ಷೇತ್ರಕ್ಕೆ 1 ಸಾವಿರ ಮನೆಗಳಂತೆ ಆಗಸ್ಟ್ 30 ರೊಳಗೆ 2.12 ಲಕ್ಷ ಮನೆಗಳ ಪೂರ್ಣಗೊಳಿಸುವಿಕೆ. ಭಾಗ್ಯಜ್ಯೋತಿ ಕಾರ್ಯಕ್ರಮದಡಿ 3 ಲಕ್ಷ ಹೊಸ ವಿದ್ಯುತ್ ಸಂಪರ್ಕ.

**ಶ್ರೀ ಮೊಯಿಲಿಯವರು ನೇತೃತ್ವದ ಸರ್ಕಾರದ ಸಾಧನೆ ಕಿರುನೋಟ**

**ಕೈಗಾರಿಕೆ :–** ಧೀರ್ಘಕಾಲದಿಂದ ನೆನೆಗುದಿಗೆ ಬಿದ್ದಿದ್ದ ವಿಜಯನಗರ ಉಕ್ಕು ಕಾರ್ಖಾನೆ ಚಾಲನೆ. ಮಂಗಳೂರಿನಲ್ಲಿ 9ದಶ ಲಕ್ಷಟನ್ ಸಾಮರ್ಥ್ಯದ ಪೆಟ್ರೋಲಿಯಂ ಶುದ್ಧೀಕರಣ ಘಟಕ ಪೂರ್ಣಗೊಳ್ಳುವಿಕೆ.

**ನೀರಾವರಿ :–** ನೀರಾವರಿ ಕ್ಷೇತ್ರಕ್ಕೆ 700 ಕೋಟಿ ರೂ. ವೆಚ್ಚದಲ್ಲಿ 85000 ಹೆಕ್ಟೇರ್ ಹೆಚ್ಚುವರಿ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕೃಷಿ ಕ್ಷೇತ್ರಕ್ಕೆ 93-94 ಕ್ಕೆ 23 ಕೋಟಿ ರೂ. ವಿನಿಯೋಗ. ವಿದ್ಯುತ್ ಉತ್ಪಾದ ನೆಯನ್ನು 7000 ಮೆಗಾವಾಟ್ಸ್‌ಗೆ ಹೆಚ್ಚಿಸಲು ಕಾರ್ಯಕ್ರಮ. 2 ಲಕ್ಷ ಗೃಹ ನಿವೇಶನಗಳ ಹಂಚಿಕೆ, 150 ಕೋಟಿ ರೂ. ವೆಚ್ಚದಲ್ಲಿ 1 ಲಕ್ಷ ಮನೆಗಳ ನಿರ್ಮಾಣ.

ಸ್ವಾತಂತ್ರ್ಯೋತ್ಸವದ "ಆಚರಣೆಯು" ಸವಿ ನೆನಪಿನಲ್ಲಿ ಸಮಗ್ರ ಸಮುದಾಯದ ಸೇವೆಗೆ ಹೆಚ್ಚಿನ ಹುರುಪಿನಿಂದ ಸನ್ನದ್ಧವಾಗಿರಲು ಸರ್ಕಾರ ಕಟಿಬದ್ಧವಾಗಿದೆ.

ಕರ್ನಾಟಕ ವಾರ್ತೆ

ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62 ಕೇಂದ್ರ ಕಛೇರಿ : { 72866
70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದ
ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13-42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :
   ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
   ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು
ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ
ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

–: ನಿರ್ದೇಶಕರು :–

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವ
13) ಶ್ರೀಮತಿ ಟಿ. ಕೆಂಪಮ್ಮನವರು M.L
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘ
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವ
ಪ್ರಧಾನ ವ್ಯವಸ್ಥಾಪಕರು

# ಗ್ಯಾಟ್-ಜ್ಞಾನಪಕ್ಷಿಗೆ ಚಿನ್ನದ ಪಂಜರ

ಜ್ಞಾನ ಎನ್ನುವುದು ಖಾಸಗಿ ಆಸ್ತಿಯಲ್ಲ. ಅದು ಒಂದು ನಿರಂತರ ಪ್ರಕ್ರಿಯೆ. ಪ್ರಕೃತಿ ವಿಧಿಸಿದ ಮಿತಿಗೂ ಮಾನವನ ಅಗತ್ಯಗಳಿಗೂ ನಡೆದಹಾಗೂ ನಡೆಯುತ್ತಿರುವ ಅನ್ವೇಷಣೆಯ ಫಲಿತಾಂಶವೇ ವಿಜ್ಞಾನ-ತಂತ್ರಜ್ಞಾನಗಳ ಬೆಳವಣಿಗೆ.

ಹೀಗಾಗಿ ವಿಜ್ಞಾನದ ಬೆಳವಣಿಗೆಯಾಗಲು ವಿಶ್ವದಲ್ಲಿ ಹಂಚಿ ಹರಡಿ ಹೋಗಿರುವ ಜ್ಞಾನದ ಬೆಳಕನ್ನು ಕ್ರೋಢೀಕರಿಸಿ ಮನುಕುಲದ ಅಭಿವೃದ್ಧಿ ಪಥದ ಅಂಧಕಾರವನ್ನು ದೂರಗೊಳಿಸುವ ಅಗತ್ಯವಿದೆ. ಅದೇ ರೀತಿ ಒಂದು ಸಮಾಜದ ವೈಜ್ಞಾನಿಕ ಅಭಿವೃದ್ಧಿ ಸಮುದಾಯದ ಆರ್ಥಿಕ ಸಾಮಾಜಿಕ ಅಗತ್ಯಗಳನ್ನೇ ಅವಲಂಬಿಸುತ್ತದೆ, ಹೀಗೆ ಈ ಅಗತ್ಯಗಳ ಪೂರೈಕೆಗೆ ಪೂರಕವಾದ ವೈಜ್ಞಾನಿಕ ಸಂಶೋಧನೆ ನಡೆಸಬಲ್ಲ, ಅನ್ವೇಷಿಸಬಲ್ಲ ಸ್ವತಂತ್ರ ವಾತಾವರಣವಿರುವುದು ಅತ್ಯಗತ್ಯ. ಅಂಥಹ ಸಂಶೋಧನೆಗಳನ್ನು, ಚಿಂತನೆಗಳನ್ನು ನಿರಾಕರಿಸುವ ಸಾಮಾಜಿಕಮೌಢ್ಯವೇ ಮನುಕುಲವನ್ನು ಮಧ್ಯಯುಗೀನ ಕಾಲದಲ್ಲಿ ಹಿಡಿದಿಟ್ಟಿತ್ತು. ಯುರೋಪಿನ ಕೈಗಾರಿಕಾ ಕ್ರಾಂತಿ ಅಂಥ ಮೌಢ್ಯಗಳನ್ನು ನಿರ್ಣಾಯಕವಾಗಿ ಸೋಲಿಸಿದರೆ ಭಾರತದಂಥ ದೇಶಗಳು ಅಂಥ ಕೈಗಾರಿಕಾ ಕ್ರಾಂತಿಯ ಹೊಸ್ತಿಲಲ್ಲಿರುವಾಗಲೇ ವಸಾಹತುಶಾಹಿಗಳ ಆಳ್ವಿಕೆಗೆ ಒಳಪಟ್ಟು ಕೈಗಾರಿಕಾ ಕ್ರಾಂತಿಯ ಜೊತೆಗೆ, ವೈಜ್ಞಾನಿಕ ಚಿಂತನೆ, ಸಂಶೋಧನೆ ಅಪೂರ್ವ ಅವಕಾಶದಿಂದ ವಂಚಿತವಾಯಿತು.

೧೯೪೭ ರಲ್ಲಿ ಬ್ರಿಟೀಷರ ನೇರ ಅಧಿಕಾರದಿಂದ ಭಾರತ ತಪ್ಪಿಸಿಕೊಂಡರೂ ಸ್ವಾತಂತ್ರ್ಯೋತ್ತರದಲ್ಲಿ ಸ್ಥಾಪಿತವಾದ ಹಲವಾರು ಪರೋಕ್ಷ ಒತ್ತಡಗಳನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ರಾಷ್ಟ್ರೀಯ ಪ್ರಯೋಗಶಾಲೆಗಳು ಜಾಡ್ಯ ದೂರಾಗದ ಸಾಮಾಜಿಕ ರೀತಿ-ರಿವಾಜುಗಳೂ, ಮತ್ತೊಂದೆಡೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಶಕ್ತರಾಷ್ಟ್ರಗಳ ಒತ್ತಡಗಳು ಭಾರತದ ವಿಜ್ಞಾನಿಗಳು ವಿಶ್ವಕ್ಕೆ ನೀಡಬಹುದಾದ ಕೊಡುಗೆಗಳನ್ನು ತಡೆ ಹಿಡಿದವು.

ಇಷ್ಟಾದರೂ ಭಾರತವು ಇಡೀ ಪ್ರಪಂಚದಲ್ಲಿ ಮೂರನೇ ಅತಿ ದೊಡ್ಡ ವೈಜ್ಞಾನಿಕಪಡೆ ಹೊಂದಿರುವ ರಾಷ್ಟ್ರವಾಗಿ ಹಣಕಾಸು ಕೊರತೆ, ವೈಜ್ಞಾನಿಕ ಸಲಕರಣೆಗಳ ಕೊರತೆಗಳ ನಡುವೆಯೂ ಹಲವು ಪ್ರಕ್ರಿಯೆಗಳನ್ನು ಸಂಶೋಧಿಸಿದೆ. ೩೦ ಕ್ಕೂ ಹೆಚ್ಚು ವೈಜ್ಞಾನಿಕ ಪ್ರಯೋಗಶಾಲೆಗಳನ್ನು ಹೊಂದಿರುವ ಸಿ ಎಸ್ ಐ ಆರ್ ದೇಶದ ಕೃಷಿ, ಹಾಗೂ ಕೈಗಾರಿಕಾ ಕ್ಷೇತ್ರಕ್ಕೆ ಸಂಬಂಧಪಟ್ಟ ಹಲವು ಅನ್ವೇಷಣೆಗಳನ್ನು ನಡೆಸುತ್ತಿದೆ. ಅವರಲ್ಲೂ ಕೃಷಿ ಕ್ಷೇತ್ರದಲ್ಲಿ ಅಧಿಕ

ಇಳುವರಿ ತಳಿ, ಕೀಟನಾಶಕ ಇತ್ಯಾದಿಗಳಂಥ ಹತ್ತು-ಹಲವು ಉಪಯೋಗಕ
ವಲಯಗಳಲ್ಲಿ ಸಂಶೋಧನೆಗಳನ್ನು ನಡೆಸುತ್ತಿದೆ.

ಆದರೆ ಕಳೆದ ಏಪ್ರಿಲ್-೧೫ ರಂದು ಭಾರತ ಸರ್ಕಾರವು ಗ್ಯಾಟ್ ಒಪ್ಪಂದ
ಸಹಿ ಮಾಡುವ ಮೂಲಕ ಪೂರಕವಾದ ವಾತಾವರಣವನ್ನು ವಿಜ್ಞಾನ-ತಂತ್ರಜ್ಞಾ
ಗಳ ಅಭಿವೃದ್ಧಿಯೇ ಇಲ್ಲವಾಗುವ ಅಪಾಯದ ಅಂಚಿಗೆ ಭಾರತವನ್ನು ತಂ
ನಿಲ್ಲಿಸಿದೆ.

**ಐ ಪಿ ಆರ್ (ಬೌದ್ಧಿಕ ಆಸ್ತಿ ಹಕ್ಕು)-ಜ್ಞಾನದ ಬಯಲಿಗೆ ಬೇಲಿ**

ಗ್ಯಾಟ್ ಒಪ್ಪಂದ ಶ್ರೀಮಂತ ದೇಶಗಳು ಬಡರಾಷ್ಟ್ರಗಳನ್ನು ಶೋಷಿಸ
ರೂಪಿಸಿಕೊಂಡ ಅಸ್ತ್ರವೆಂಬುದು ಈಗ ಸ್ಪಷ್ಟವಾಗಿದೆ. ಇದರಿಂದಾಗಿ ತಮ್ಮ ದೇ
ಗಳು ಸ್ವತಂತ್ರವಾಗಿ ಅಭಿವೃದಿ ಆಗದೆ ಮತ್ತೊಮ್ಮೆ ವಸಾಹತುವಾಗುತ್ತವೆಯೆಂ
ಹಲವಾರು ದೇಶಗಳು ವಿಜ್ಞಾನಿಗಳ ಗುಂಪುಗಳ ವಿರೋಧ ವ್ಯಕ್ತಪಡಿಸಿವೆ.

ಇದೆಲ್ಲಕ್ಕಿಂತ ಹೆಚ್ಚಾಗಿ ಇಡೀ ಮನಕುಲದ ಅಭಿವೃದ್ಧಿಯನ್ನೇ ತಡೆಹಿಡಿಯು
ಒಪ್ಪಂದವೊಂದು ಗ್ಯಾಟ್‌ನಲ್ಲಿ ಅಡಕವಾಗಿದೆ. ಅದೇ ಬೌದ್ಧಿಕ ಆಸ್ತಿಹಕ
ಇದರ ಪ್ರಕಾರ ಯಾವುದೇ ಸಂಶೋಧನೆಯ ಉತ್ಪನ್ನದ ಸಂಪೂರ್ಣ ಹಕ್ಕು ಅದನ
ಸಾಧಿಸಿದ ವಿಜ್ಞಾನಿಗೆ ಅರ್ಥಾತ್ ಅದನ್ನು ಪ್ರಾಯೋಜಿಸಿದ ಬಹುರಾಷ್ಟ್ರೀ
ಕಂಪನಿಗೆ ಸೇರುತ್ತದೆ. ೨೦ ವರ್ಷಗಳ ಕಾಲ ವಿಶ್ವದಲ್ಲೇ ಬೇರೆ ಬೇರೆ ಯಾರ
ಇದೇ ರೀತಿಯ ಪ್ರಯತ್ನವನ್ನು ಮಾಡುವಂತಿಲ್ಲ. ಮೊದಲು ಈ ಸ್ವಾಮ್ಯದ ಅವ
ಕೇವಲ ೫ ವರ್ಷವಿತ್ತು.

ಎರಡನೆಯದಾಗಿ ಇದುವರೆತನಕ ಯಾವುದೇ ಹೊಸ ಅನ್ವೇಷಣೆಯ ಹಾದಿ
ಬಗ್ಗೆ ಮಾತ್ರ ಸಂಪೂರ್ಣ ಸ್ವಾಮ್ಯವಿರುತ್ತಿತ್ತು. ಆದರೆ ವಿಶ್ವದಲ್ಲಿ ಬೇರೆ ಯಾ
ಬೇಕಾದರೂ ವಿಭಿನ್ನ ಪ್ರಕ್ರಿಯೆಯಿಂದ ಅದೇ ರೀತಿಯ ಸಂಶೋಧನೆ ಸಾಧಿಸಬಹು
ದಿತ್ತು. ಉದಾಹರಣೆಗೆ ರ್‍ಯಾನಿಟಿಡೈನ್ ಎಂಬ ಒಂದು ಅಲ್ಸರ್ ನಿವಾರ
ಔಷಧಿಯನ್ನು ವಿದೇಶದಲ್ಲಿ ಅನ್ವೇಷಿಸಿದರೆ ಭಾರತದಲ್ಲಿ ಬೇರೆ ಪ್ರಕ್ರಿಯೆಯಿಂ
ಅನ್ವೇಷಿಸಬಹುದಾಗಿತ್ತು. ಆದರೆ ಗ್ಯಾಟ್‌ಪ್ರಕಾರ ಒಂದು ಸಂಶೋಧನೆಯ
ಸಂಪೂರ್ಣ ಸ್ವಾಮ್ಯ ಕೇವಲ ಪ್ರಕ್ರಿಯೆ ಮೇಲಿಲ್ಲದೆ ಇಡೀ ಉತ್ಪನ್ನದ ಮೇಲಾಗಿರು
ತ್ತದೆ. ಎಂದರೆ ಉತ್ಪನ್ನವನ್ನು ವಿಶ್ವದಲ್ಲಿ ಬೇರೆ ಯಾವ ವಿಜ್ಞಾನಿಯೂ, ಯಾ
ಯಾವ ಪ್ರಕ್ರಿಯೆಗಳ ಮೂಲಕವೂ ಅದನ್ನು ಸಂಶೋಧಿಸುವಂತಿಲ್ಲ. ಅದೂ ಇಪ್ಪತು
ವರ್ಷಗಳ ಕಾಲ. ಅನಂತರವೂ ಇನ್ನು ಇಪ್ಪತ್ತು ವರ್ಷಗಳ ಕಾಲ ನಿರ್ದಿಷ್ಟ
ಪ್ರಕ್ರಿಯೆಯ ಸ್ವಾಮ್ಯವನ್ನು ವಿಜ್ಞಾನಿ; ಉಳಿಸಿಕೊಳ್ಳಬಹುದು.

ಇದರಿಂದ ಬಹುರಾಷ್ಟ್ರೀಯ ಕಂಪನಿಗಳಿಗೆ ಅಬಾಧಿತವಾಗಿ ೪೦ ವರ್ಷಗಳ ಕಾಲ ಇಡೀ ವಿಶ್ವದಲ್ಲೇ ಉತ್ಪನ್ನದ ಮೇಲೆ ಮಾರುಕಟ್ಟೆ ಏಕಸ್ವಾಮ್ಯ ದೊರೆಯುವುದು ಒಂದೆಡೆಯಾದರೆ ಅದಕ್ಕೆ ಸಂಬಂಧಿತ ಜ್ಞಾನವೂ ಸಹ ನಲವತ್ತು ವರ್ಷಗಳ ಕಾಲ ಹೊರ ವಿಶ್ವಕ್ಕೆ ಸಿಗದೆ ಹೋಗುತ್ತದೆ. ಅದಕ್ಕೆ ಸಂಬಂಧಪಟ್ಟ ಸಂಶೋಧನೆಗಳ ಮೇಲೆ ಹೇರಲಾಗುವ ಅದರಲ್ಲೂ ಭಾರತದಲ್ಲಿ ನಡೆಯುತ್ತಿರುವ ಕೃಷಿ ತಳಿ ಅಭಿವೃದ್ಧಿ, ಕೈಗಾರಿಕೆಗೆ ಸಂಬಂಧಪಟ್ಟ ತೀವ್ರ ತಾಪ ಕಂಡಕ್ಟರ್ ಸಂಶೋಧನೆ ಇತ್ಯಾದಿಗಳನ್ನೆಲ್ಲ ನಿಲ್ಲಿಸಬೇಕಾಗುತ್ತದೆ. ಜೊತೆಗೆ ನೂರಾರು ಕೋಟಿ ಖರ್ಚಿನಲ್ಲಿ ಅರ್ಧ ದಾರಿ ಕ್ರಮಿಸಿರುವ ಹಲವಾರು ಸಂಶೋಧನೆಗಳನ್ನು ನಿಲ್ಲಿಸಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಔಷಧ ಕ್ಷೇತ್ರದಲ್ಲಿ ಭಾರತ-ಭಾರತೀಯರು ಅಪಾರ ಹಿನ್ನಡೆಯನ್ನನುಭವಿಸ ಬೇಕಾಗುತ್ತದೆ. ಹಲವಾರು ಜೀವರಕ್ಷಕ ಔಷಧಗಳನ್ನು ಹೊರದೇಶದಲ್ಲಿ ಅನ್ವೇಷಿಸಿದ ಕೆಲವು ತಿಂಗಳಲ್ಲೇ ಬೇರೊಂದು ಪ್ರಕ್ರಿಯೆಯ ಮೂಲಕ ಭಾರತದಲ್ಲಿ ಅಂಥ ಔಷಧಗಳು ಲಭ್ಯವಾಗುತ್ತಿತ್ತು.

ಉದಾ : ಕೆಳಗಿನ ಪಟ್ಟಿಯು ಕೇವಲ ಜೀವರಕ್ಷಕ ಔಷಧಿಗಳನ್ನು ಸಂಶೋಧನೆ-ಗೊಂಡ ನಂತರ ಭಾರತಕ್ಕೆ ಬರಲು ತೆಗೆದುಕೊಂಡ ಅವಧಿಯನ್ನು ಸೂಚಿಸುತ್ತದೆ.

| ಔಷಧಿಗಳು | ಬಳಕೆಗೆ ಬಂದದ್ದು | |
|---|---|---|
| | ಪ್ರಪಂಚದಲ್ಲಿ | ಭಾರತದಲ್ಲಿ |
| ಸಾಲ್ಯೂಟಮಾಲ್(ಅಸ್ತಮಾ ಔಷಧಿ) | ೧೯೭೩ ೧೯೭೭ | |
| ಮೆಜಂಡ ಜೋಲ್ (ಜಂತುಹುಳುವಿಗೆ) | ೧೯೭೪ ೧೯೭೫ | |
| ರ್‍ಯಾನಿಟಡಾನ್ | ೧೯೮೧ | ೧೯೮೫ |
| ನೆಪ್ರಾಕ್ಸಿನ್ | ೧೯೭೮ | ೧೯೮೨ |

ಹೀಗೆ ಕೇವಲ ನಾಲ್ಕುವರ್ಷಗಳಲ್ಲಿ ಹೊಸಪ್ರಕ್ರಿಯೆಯನ್ನು ಸಂಶೋಧಿಸಿ ಭಾರತದಲ್ಲಿ ಔಷಧವನ್ನು ಬಳಕೆಗೆ ತರಲಾಗುತ್ತಿತ್ತು. ಹೀಗಾಗಿ ಒಂದೆಡೆ ಭಾರತೀಯರಿಗೆ ಸಾಪೇಕ್ಷವಾಗಿ ಸುಲಭ ಬೆಲೆಯಲ್ಲಿ ಔಷಧ ದೊರೆತರೆ ಮತ್ತೊಂದೆಡೆ ಭಾರತೀಯ ಕೈಗಾರಿಕಾ ಕ್ಷೇತ್ರದಲ್ಲಿ ವೈಜ್ಞಾನಿಕ ಸಂಶೋಧನೆ ಸಾಗುತ್ತಿತ್ತು, ಆದರೆ, ಇಂದು ಗ್ಯಾಟ್‌ನಿಂದಾಗಿ ೪೦ ವರ್ಷಗಳ ಕಾಲ ಭಾರತ ನಿರ್ದಿಷ್ಟ ಔಷಧಿಯನ್ನು ಮಾಡಿಕೊಡುವುದಲ್ಲದೆ ವಿಜ್ಞಾನ ಹಾಗೂ ತಂತ್ರಜ್ಞಾನವೂ ಕುಂಠಿತವಾಗುತ್ತದೆ.

ಏಷ್ಯ ಮತ್ತು ಆಫ್ರಿಕಾದಲ್ಲಿ ವಸಾಹತುಶಾಹಿ ಶೋಷಣೆ ನಡೆಸಿದ ವಸಾ-ಹತುಶಾಹಿಗೂ ಕೇವಲ ಅಲ್ಲಿನ ಸಂಪನ್ಮೂಲಗಳನ್ನು ಮಾತ್ರ ಕೊಂಡೊಯ್ಯದೆ ಅಲ್ಲಿನ ಜ್ಞಾನಭಂಡಾರವನ್ನು ಕದ್ದೊಯ್ದರು. ಶತಮಾನಗಳ ನಾಗರಿಕತೆಯಿಂದ

ಏಷ್ಯಾ ಆಫ್ರಿಕಾಗಳಲ್ಲಿ ಸಂಶೋಧಿಸಲಾಗಿದ್ದ ಸುಮಾರು ೧೧.೦೦೦ ಭತ್ತದ ತಳಿಗಳನ್ನು ಕೊಂಡೊಯ್ದಿರುವ ವಿದೇಶಿಯರು ಈಗ ಮೊತ್ತದಲ್ಲೇ ಸುಧಾರಿತ ತಳಿಗಳೆಂದು ಬಡರಾಷ್ಟ್ರಗಳಿಗೆ ಮಾರುತ್ತಿದ್ದರು. ಈಗ ತಳಿಗಳ ಮೇಲೆ ಸಂಶೋಧನೆಯು ಆಗ ಬಾರದೆಂದು ಗ್ಯಾಟ್ ಮೂಲಕ ನಿಷೇಧ ಹೇರಿದ್ದಾರೆ. ಹೀಗಾಗಿ ಬಡರಾಷ್ಟ್ರಗಳು ಸಂಪನ್ಮೂಲಗಳಿಗೆ ಮಾತ್ರವಲ್ಲ, ಜ್ಞಾನಕ್ಕೂ ಶ್ರೀಮಂತ ರಾಷ್ಟ್ರಗಳಮೇಲೆ ಅವಲಂಬಿಸಿ ದಾಸ್ಯಕ್ಕೀಡಾಗಬೇಕಾಗುತ್ತದೆ.

## ಎರವಲು ಆರ್ಥಿಕತೆ- ಎರವಲು ಜ್ಞಾನ

ಇದರೊಡನೆ ಗ್ಯಾಟ್ ಒಪ್ಪಂದ ಒಂದು ದೇಶದ ವೈಜ್ಞಾನಿಕ ಸಂಶೋಧನೆಗೆ ಪ್ರೇರಕವಾಗಬೇಕಾದ ಸ್ವದೇಶಿ ಆರ್ಥಿಕ ಪ್ರಗತಿಯನ್ನೇ ತಡೆ ಹಾಕುತ್ತದೆ. ಮೊದಲೇ ಹೇಳಿದಂತೆ ಯಾವುದೇ ದೇಶದ ವೈಜ್ಞಾನಿಕ ಬೆಳವಣಿಗೆಗೆ ಆ ಸಮಾಜದ ಆರ್ಥಿಕ ಅಗತ್ಯಗಳು ಪ್ರೇರಣೆ ನೀಡಿದರೆ, ಆ ದೇಶ ಸ್ವತಂತ್ರ-ಒತ್ತಡರಹಿತ-ರಾಜಕೀಯ ವಿಜ್ಞಾನ ಬೆಳವಣಿಗೆಗೆ ಉತ್ತೇಜನ ನೀಡುತ್ತದೆ. ಇಂತಹ ಸ್ವತಂತ್ರ ವಾತಾವರಣ ದಲ್ಲೇ ಒಬ್ಬ ಜೇಮ್ಸ್ ವ್ಯಾಟ್ ಉಗಿಬಂಡಿಯನ್ನು ಕಂಡುಹಿಡಿಯಲು ಸಾಧ್ಯವಾದದ್ದು. ಕೈಗಾರಿಕಾ ಕ್ರಾಂತಿಯ ಅಗತ್ಯಗಳ ಒತ್ತಡದಲ್ಲೇ ಗ್ರಹಾಂಬೆಲ್ ಟೆಲಿಫೋನ್ ಕಂಡುಹಿಡಿದದ್ದು. ಒಬ್ಬ ಗುಟೆನ್‌ಸ್‌ಬರ್ಗ್ ಮುದ್ರಣ ಯಂತ್ರವನ್ನು ಕಂಡು ಹಿಡಿದದ್ದು.

ಆದರೆ ಇಂತಹ ಅನುಭವವನ್ನು ಶ್ರೀಮಂತ ರಾಷ್ಟ್ರಗಳೇ ಇಂದು ಬಡ ರಾಷ್ಟ್ರಗಳಲ್ಲಿ ಒಂದು ಸ್ವತಂತ್ರ ಆರ್ಥಿಕತೆಯ ಬೆಳವಣಿಗೆಯನ್ನು ಆ ಮೂಲಕ ಸ್ವತಂತ್ರ ವೈಜ್ಞಾನಿಕ ಬೆಳವಣಿಗೆಯನ್ನು ನಿಷೇಧಿಸಿ, ತಮ್ಮ ಮೇಲೆ ಅವಲಂಬಿಸುವಂತೆ ಮಾಡಿಕೊಳ್ಳುತ್ತಿವೆ. ಒಟ್ಟು ಆರ್ಥಿಕತೆಯನ್ನು ಸಂಪೂರ್ಣವಾಗಿ ಆಮದು ಅವಲಂಬಿತ ಹಾಗೂ ವಿದೇಶಿ ಬಂಡವಾಳ, ತಂತ್ರಜ್ಞಾನದ ಮೇಲೆ ಆಧಾರವಾಗಿರುವಂತೆ ಮಾಡಿಕೊಳ್ಳುವುದೇ, ಗ್ಯಾಟ್ ಒಪ್ಪಂದದ ತಿರುಳು. ಈಗಾಗಲೇ ಭಾರತೀಯ ಕೈಗಾರಿಕೆಗಳು ವಿದೇಶಿ ತಂತ್ರಜ್ಞಾನದ ಆಮದಿನ ಮೇಲೆ ೯೨೦ ಕೋಟಿ ರೂ.ಗಳಷ್ಟು ವ್ಯಯ ಮಾಡುತ್ತಿವೆ. ಇದು ಈ ಕೈಗಾರಿಕೆಗಳು ತಮ್ಮ ಸಂಶೋಧನೆಗಳ ಮೇಲೆ ವ್ಯಯಿಸುವ ಹಣಕ್ಕಿಂತ ಏಷ್ಟೋ ಪಾಲು ಹೆಚ್ಚು. ಭಾರತದಲ್ಲಿನ ಸಂಶೋಧನೆಗಳ ಮೇಲೆ ಒಟ್ಟು ವೆಚ್ಚದಲ್ಲಿ ಅತ್ಯಧಿಕ ಪಾಲು ಕೇಂದ್ರ ಸರ್ಕಾರದ್ದು. ಆದರೆ ಸಾರ್ವಜನಿಕ ಕ್ಷೇತ್ರಗಳನ್ನು ಖಾಸಗೀಕರಿಸಿ, ಅದರಲ್ಲೂ ವಿದೇಶಿ ಉದ್ಯಮ ಪತಿಗಳಿಗೆ ಮಾರುತ್ತಿರುವುದರಿಂದ ಸರ್ಕಾರವೂ ವೈಜ್ಞಾನಿಕ ಸಂಶೋಧನೆಯಿಂದ ಹಿಂದೆ ಸರಿಯುತ್ತಿದೆ. ಹೀಗಾಗಿ ಭಾರತ

ಸರ್ಕಾರ ೯೦-೯೧ ರಲ್ಲಿ ಒಟ್ಟು ರಾಷ್ಟ್ರೀಯ ಆದಾಯದ ಶೇ. ೦೯೬ ನಷ್ಟು ವ್ಯಯ ಮಾಡಿದ್ದರೆ ೯೨ ರಲ್ಲಿ ಅದು ಕೇವಲ ೯.೮೯ ರಷ್ಟಾಗಿತ್ತು, ಈಗ ಅದು ಇನ್ನಷ್ಟು ಕಡಿಮೆಯಾಗಿದೆ. ಖಾಸಗೀ ಕ್ಷೇತ್ರದಲ್ಲಿಯೂ ಸಂಪೂರ್ಣವಾಗಿ ವಿದೇಶಿ ತಂತ್ರ ಜ್ಞಾನವನ್ನೆ ಅವಲಂಬಿಸಿರುವುದರಿಂದ ೯೧-೯೨ ರಲ್ಲಿ ಅದರ ಸಂಶೋಧನಾ ವೆಚ್ಚ ಒಟ್ಟು ಭಾರತೀಯ. ವೆಚ್ಚದ ಶೇಕಡ ೧೦ ನ್ನು ದಾಟಲಿಲ್ಲ.

ಇತರ ದೇಶಗಳಂತೆ ಭಾರತದ ಸಂಶೋಧನಾ ವೆಚ್ಚದ ಶೇ. ೫೦ ಪಾಲು ರಕ್ಷಣೆಗಾಗಿ ಆಗುತ್ತಿತು. ಅಂತಾರಾಷ್ಟ್ರೀಯ ಒತ್ತಡದಿಂದ ಆ ಸಂಶೋಧನೆಯೂ ಕುಂಠಿತವಾಗುತ್ತಿದೆ.

ಹೀಗಾಗಿ ಗ್ಯಾಟ್ ಒಪ್ಪಂದವು ಸ್ವಾಯತ್ತ ರಾಷ್ಟ್ರಗಳ ವೈಜ್ಞಾನಿಕ ಅಭಿವೃದ್ಧಿಯ ಮೇಲೂ ನಿಷೇಧ ಹೇರುತ್ತದೆ. ಬೌದ್ಧಿಕ ಆಸ್ತಿ ಹಕ್ಕಿನ ಮೂಲಕ ನೇರವಾಗಿ ಬಡರಾಷ್ಟ್ರಗಳ ವೈಜ್ಞಾನಿಕ ಹಾಗೂ ತಂತ್ರಜ್ಞಾನದ ಅಭಿವೃದ್ಧಿಯನ್ನು ನಾಶಪಡಿಸುತ್ತದೆ. ಅಲ್ಲದೇ ಅದರಲ್ಲಿನ ಇತರ ಒಪ್ಪಂದಗಳ ಮೂಲಕ ವೈಜ್ಞಾನಿಕ ಬೆಳವಣಿಗೆಗೆ ಪ್ರೇರಕವಾಗಬೇಕಾದ ಆರ್ಥಿಕತೆಯನ್ನು ಉತ್ತೇಜನ ನೀಡಬೇಕಾದ ವಾತಾವರಣವನ್ನೂ ನಾಶಗೊಳಿಸಿ ಸಂಪೂರ್ಣ ದಾಸ್ಯಕ್ಕೀಡು ಮಾಡುತ್ತದೆ. ೪೭ ಕ್ಕೆ ಮುನ್ನ ಬ್ರಿಟೀಷರು ಇಲ್ಲಿನ ತಂತ್ರಜ್ಞಾನ, ಗುಡಿಕೈಗಾರಿಕೆಗಳನ್ನು ನಾಶಪಡಿಸಿ ಭಾರತವನ್ನು ಗುಲಾಮಗೊಳಿಸದಂತೆ ಗ್ಯಾಟ್ ಒಪ್ಪಂದ ಪರೋಕ್ಷವಾಗಿ ಅದನ್ನೇ ಸಾಧಿಸುತ್ತದೆ. ಆದ್ದರಿಂದ ಒಟ್ಟಾರೆ ಮನುಕುಲದ ಅಭಿವೃದ್ಧಿಯ ಗತಿಯನ್ನೇ ಗ್ಯಾಟ್ ತಡೆಯುತ್ತದೆ.

ಒಂದು ಸ್ವತಂತ್ರ ವೈಜ್ಞಾನಿಕ ಬೆಳವಣಿಗೆಯ ವಾತಾವರಣ ಬಯಸುವರೆಲ್ಲಾ ಗ್ಯಾಟ್ ಅನ್ನು ವಿರೋಧಿಸಬೇಕಾಗಿದೆ.

(ಸೌಜನ್ಯ : ಬಿತ್ತರ, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ ಕಮಲಾಪುರ-೫೮೩೨೨೧)

—ಕೆ. ಜಿ. ವಾಸುಕಿ, ಸಂಪಾದಕ, ವಿಜ್ಞಾನ ಸಂಗಾತಿ, ಕನ್ನಡ ವಿಶ್ವ-
ವಿದ್ಯಾಲಯ, ಹಂಪಿ, ವಿದ್ಯಾರಣ್ಯ ಕಮಲಾಪುರ-೫೮೩೨೨೯

## ಗಿಳಿಮರಿ

ಅಕ್ಕರೆ ಗಿಳಿಮರಿ
ರೆಕ್ಕೆಯ ಬಿಚ್ಚಿ
ಹಾರುತಲಿರುವಿ ಬಾನೊಳಗೆ! ||1||

ಬಗೆ ಬಗೆ ಹಣ್ಣು
ತಿನ್ನಲು ಕೊಡುವೆ
ಬಾ, ಬಾ, ನಮ್ಮ ಮನಿಯೊಳಗೆ! ||2||

ನನ್ನಯಸಂಗಡ
ಆಡಲು ಚಿಣ್ಣರು
ಮನಿಯಲಿ ಅಂತು ನನಗಿಲ್ಲ ! ||3||

ಮರದಲಿ ಕುಳಿತು
ಕೊರಗುವಿ ಏಕೇ
ನನ್ನಂಥ ಗೆಳೆಯನು ನಿನಗಿಲ್ಲ !||4||

ಆಟವ ಆಡಿ
ಪಾಠವ ಓದಿ
ನಲಿಯುತ ಬಾಳೋಣ ಬಾ ಇಲ್ಲಿ! ||

ದೇವರ ತೋಟದ
ಹೂಗಳು ನಾವು
ಭೇದವು ಇರದು ನೋಡಿಲ್ಲಿ ! ||6||

ನಿನ್ನಯ ನುಡಿಯಲಿ
ಜೇನಿನ ಸವಿಯಿದೆ
ಕೇಳುವ ನನ್ನಯ ಮನದಾಶೆ ! ||7||

ಮಾತಿನ ಅರಗಿಣಿ
ಮೌನವ ತೊರೆದು
ಆಡು ಕನ್ನಡ ತಾಯಿ ಭಾಷೆ ! ||8||

ಲೇಖಕರು : ಅ. ಬಾ. ಜಿ. ಗುರೂಜಿ, ನಾಗಣಸೂರ, ಸೋಲಾಪುರ ಜಿಲ್ಲೆ.

## ಸದ್ಭಾವನಾ ಸ್ಮರಣೆ

ಮಹಾತ್ಮನೊಬ್ಬನ ಜನ್ಮ ದಿನವಿದು
ರಾಜೀವ್‌ಗಾಂಧಿಯ ಸ್ಮರಣೆ ಇದು
ಭಾರತಾಂಬೆಯ ಶಿಲ್ಪಿಯದು
ಭಾರತದೇಶದ ನಾಯ್ಕನದು ||ಮ||

ಅಖಂಡ ಭಾರತ ನಾಯಕನು
ನೆಹರೂ ಚಾಚನ ಮೊಮ್ಮಗನು
ಆಗಸ್ಟ್ 20 ರಲ್ಲಿ ಜನಿಸಿದನು
ದೆಹಲಿಯಲಿ ಅವ ಹುಟ್ಟಿದನು ||ಮ||

ನವೋದಯ ಶಾಲೆಯ ಸ್ಥಾಪಕನು
ಮಕ್ಕಳ ಏಳ್ಗೆಗೆ ದುಡಿದವನು
ಧರ್ಮ ಕಾರ್ಯಗಳ ಮಾಡಿದನು
ಜನತೆಯ ಏಳ್ಗೆಗೆ ಶ್ರಮಿಸಿದನು

ಕೊಂದರು ಇವನ ಹಂತಕರು
ಏನೂ ಅರಿಯದ ಮೂಢರು
ರಾಷ್ಟ್ರನಾಯಕನ ಕೊಂದಿಹರು
ದೇಶವ ಅನಾಥ ಮಾಡಿಹರು ||ಮ||

ಲೇಖಕರು : ಹೆಚ್. ಎಸ್. ಕೋಮಲೇಶ, ಜವಾಹರ ನವೋದಯ ವಿದ್ಯಾಲಯ, ಗೊಲ್ಲಹಳ್ಳಿ.

# ಶ್ರದ್ಧಾಂಜಲಿ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಶ್ರೀಮಚ್ಚಿನ್ಮೂಲಾದ್ರಿ ಬೃಹನ್ಮಠ ಮಹಾಸಂಸ್ಥಾನ, ಚಿತ್ರದುರ್ಗ ಅವರು ದಿನಾಂಕ 7-8-94 ರಂದು ಲಿಂಗೈಕ್ಯರಾದುದನ್ನು ತಿಳಿದು "**ಸಿದ್ಧಗಂಗಾ**" **ಅತೀವ** ದುಃಖಕ್ಕೊಳಗಾಯಿತು.

ಕರ್ನಾಟಕದ ವೀರಶೈವ ಮಠಗಳಲ್ಲಿ ಚಿತ್ರದುರ್ಗದ ಶ್ರೀ ಮುರುಘ-ರಾಜೇಂದ್ರ ಬೃಹನ್ಮಠವು ಹೆಸರಿಗೆ ಅನ್ವರ್ಥವಾಗಿ ಧರ್ಮಸಂಸ್ಥೆಯಾಗಿದೆ. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು 1964 ರಲ್ಲಿ ಶೂನ್ಯಪೀಠದ 26 ನೆಯ ಜಗದ್ಗುರುಗಳಾಗಿ ಅಧಿಕಾರ ವಹಿಸಿಕೊಂಡರು. ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠವನ್ನು ಸ್ಥಾಪಿಸಿ ಶಿಕ್ಷಣಕ್ಷೇತ್ರದಲ್ಲಿ ಗಣನೀಯ ಸೇವೆಗೈದಿದ್ದರು "ಶ್ರೀ ಜಗದ್ಗುರು ಮುರುಘರಾಜೇಂದ್ರ ಗ್ರಂಥಮಾಲೆ"ಯ ಮೂಲಕ ಸಾಹಿತ್ಯ ಕೈಂಕರ್ಯವನ್ನು ಕೈಗೊಂಡಿದ್ದರು. ಬೃಹನ್ಮಠದ ನವೀಕರಣ, ಶಾಖಾಮಠಗಳ ಜೀರ್ಣೋದ್ಧಾರ, ಕಲ್ಯಾಣಮಂಟಪಗಳ ನಿರ್ಮಾಣ ಮುಂತಾದ ಸಮಾಜೋದ್ಧಾರ ಕಾರ್ಯಗಳನ್ನು ನಡೆಸಿದ್ದರು. ಧರ್ಮಸಾಹಿತ್ಯ ಸಂಸ್ಕೃತಿಗಳ ಪ್ರಸಾರದಲ್ಲಿ ಜಗದ್ಗುರುಗಳು ನಿರಂತರ ನಿರತರಾಗಿದ್ದರು. ಭಕ್ತಾದಿಗಳು ವಿಚಾರವಂತರು ಶ್ರೀ ಶ್ರೀ ಶ್ರೀಗಳವರ ಸೇವಾಕಾರ್ಯಗಳಿಂದ ಆಕರ್ಷಿತರಾಗಿದ್ದರು. ಶ್ರದ್ಧಾನಿಷ್ಠೆಗಳಿಂದ ಅನುಸರಿಸುತ್ತ ಬಂದಿದ್ದರು.

ಜಗದ್ಗುರುಗಳು ಉದ್ದಾಮ ವಿದ್ವಾಂಸರಾಗಿದ್ದರು. ಉದಾತ್ತ ಚಿಂತಕರಾಗಿದ್ದರು. ಉತ್ತಮ ವಾಗ್ಮಿಗಳಾಗಿದ್ದರು. ನಿರ್ಭಿದೆಯ ಸ್ವಭಾವ ಅವರದಾಗಿತ್ತು. "ಮಾತಿನಲ್ಲಿ ಸತ್ವವಿರಬೇಕು, ತತ್ವವಿರಬೇಕು. ಆ ಮಾತಿನಲ್ಲಿ ತಾನಿರಬೇಕು ಅಂದರೆ ತನ್ನ ಚಾರಿತ್ರ್ಯ ಇರಬೇಕು. ಅಂತಹ ಮಾತು ಜ್ಯೋತಿಯಾಗುತ್ತದೆ" ಎನ್ನುತ್ತಿದ್ದರು. ಜಗದ್ಗುರುಗಳು ಜೀವಂತ ವಿಶ್ವಕೋಶವಾಗಿದ್ದರು.

ಜಗದ್ಗುರುಗಳ ಅಗಲಿಕೆಯಿಂದ ಸಮಾಜಕ್ಕೆ ತುಂಬಲಾರದ ನಷ್ಟ-ವಾಗಿದೆ. ಬೃಹನ್ಮಠದ ಭಕ್ತಾದಿಗಳಿಗೆ **ಅತೀವ** ಶೋಕ ಉಂಟಾಗಿದೆ. ಪೂಜ್ಯಪಾದರು '**ಮಹಾಲಿಂಗ**' ವಾದ ಈ ಸಂದರ್ಭದಲ್ಲಿ "**ಸಿದ್ಧಗಂಗಾ**" ಭಕ್ತಿ ಪೂರ್ವಕವಾಗಿ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

ಬೃಹನ್ಮಠದ 27 ನೆಯ ಜಗದ್ಗುರುಗಳಾಗಿರುವ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳು ಲಿಂಗೈಕ್ಯ ಜಗದ್ಗುರುಗಳ ಲಿಂಗದ ಬೆಳಕಿನಲ್ಲಿ ಮುನ್ನಡೆದು ಸಮಾಜವನ್ನು ಭಕ್ತಾದಿಗಳನ್ನು ಆಶೀರ್ವದಿಸುವಂತಾಗಲಿ ಎಂದು ಪ್ರಾರ್ಥಿಸುತ್ತದೆ "ಸಿದ್ಧಗಂಗಾ"

# ಮೃತ್ಯು ಮುಟ್ಟದ ಮುನ್ನ

ಭಯವೇಕೆ ಮುದ್ದು ಜೀವವೆ.
ಬಯಸಿ ಬರುವ ಮೃತ್ಯುವಿಗೆ
ಕಾಯದೊಳಡಗಿರುವ ಚೇತನಾ-
ಮಯ ಆತ್ಮಂಗೆ ಮರಣ ಉಂಟೆ ?

ಎನಿತು ಕಾಲ ಕಾಯುವೆ ನೆಲದ ಮೇಲೆ
ಕೊನೆ ಇಲ್ಲವೇನು ? ಮರುಳೆ ಈ
ತನುವು ಉರುಳಿ ಬೀಳುವ ಮುನ್ನ
ನೆನೆಸು ನೆಮ್ಮದಿಯಿಂ ಗುರುಸಿದ್ಧಲಿಂಗನನು

ಉಸಿರಿರುವರು ಮಹಾನುಭಾವರು
ವಸುಧೆಯೊಳ್ ಹುಟ್ಟಿಬರುವದು ದುರ್ಲಭಂ
ತುಸು ಆಲೋಚನ ಗೈದು ನಡೆ
ಕುಸಿಯದಿರಲಿಬಾಳು ವ್ಯರ್ಥದಿಂ

ನೆರೆನಂಬು ಹೆದರದಿರು ಬರಲಿ
ಕರಿಕಾರ್ಮೋಡಗಳು ಜೀವನದಿ, ಮಳೆ
ಸುರಿದ ಬಳಿಕವೇ ಸೂರ್ಯೋದಯ
ಕುಂಗದಿರಲಿ ಭಕ್ತಿ ವಿಶ್ವಾಸ ಗುರುವಿನಲಿ

ಗಳಿಕೆ ಉಳಿಕೆಯಲಿಯೇ ವ್ಯಯಸದಿರು
ಇಳೆಯ ಬದುಕನು, ಹಂಬಲಿಸಿ ಆರಾಧಿಸು
ಅಳಿಯದ ಅಂತರಂಗದಾನಂದವನು ಈ
ಬಾಳ ಬೆಳಕಿಗೆ ಕತ್ತಲಾವರಿಸುವ ಮುನ್ನ

ಲೇಖಕರು : ಎಂ. ಕೆ. ಛಾನೆಂಗಿ, ಕೃಷಿ ಇಲಾಖೆ, ಅಥಣಿ.

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ–572104.